ಜನಪ್ರಿಯ ಗ್ರಂಥಮಾಲೆ

೮೦೦

# ಕವಿ-ಕರ್ಮಯೋಗಿ ದಿನಕರ ದೇಸಾಯಿ

ವಿಷ್ಣು ನಾಯ್ಕ



ಕರ್ನಾಟಕ ವಿಶ್ವವಿದ್ಯಾಲಯ

ಧಾರವಾಡ

ಫೆಬ್ರುವರಿ, ೧೯೮೯

೪೦೦

# ಕವಿ-ಕರ್ಮಯೋಗಿ ದಿನಕರ ದೇಸಾಯಿ

ವಿಷ್ಣು ನಾಯ್ಕ




ಪ್ರಸಾರಾಂಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
ಫೆಬ್ರುವರಿ, ೧೯೮೯

ಪ್ರಕಾಶಕರು :

ಎಸ್. ಬಿ. ನಾಯಕ
ನಿರ್ದೇಶಕರು, ಪ್ರಸಾರಾಂಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಪ್ರಥಮ ಮುದ್ರಣ : ೫,೦೦೦ ಪ್ರತಿಗಳು

ಫೆಬ್ರುವರಿ, ೧೯೬೭



ಬೆಲೆ : ರೂ. ೧—೨೦

ಮುದ್ರಕರು :

ರಾಜಶ್ರೀ ಪ್ರಿಂಟಿಂಗ ಪ್ರೆಸ್
ತಡಕೋಡ ಗಲ್ಲಿ, ಧಾರವಾಡ

# ಮುನ್ನುಡಿ

ಕರ್ನಾಟಕ ವಿಶ್ವವಿದ್ಯಾಲಯವು ತನ್ನ ಪ್ರಸಾರಾಂಗದ ಮುಖಾಂತರ ಕೈಕೊಂಡು ನಡೆಸುತ್ತಿರುವ ಜ್ಞಾನಪ್ರಸಾರದ ಯೋಜನೆಗಳಲ್ಲಿ ಈ ಉಪನ್ಯಾಸ ಗ್ರಂಥಮಾಲೆ ಅತ್ಯಂತ ಮುಖ್ಯವೂ, ಜನಪ್ರಿಯವೂ ಆಗಿರುವುದು ಹೆಮ್ಮೆಯ ಮಾತಾಗಿದೆ. ವಿಶ್ವವಿದ್ಯಾಲಯದ ಆಡಳಿತ ಕ್ಷೇತ್ರದಲ್ಲಿರುವ ನಾಲ್ಕು ಜಿಲ್ಲೆಗಳಲ್ಲಿಯೂ ಉಪನ್ಯಾಸ ಶಿಬಿರಗಳನ್ನು ಏರ್ಪಡಿಸಲಾಗುತ್ತಿದ್ದು, ವಿಶ್ವವಿದ್ಯಾಲಯದ ಮತ್ತು ಇದಕ್ಕೆ ಸೇರಿದ ಕಾಲೇಜುಗಳ ಪ್ರಾಧ್ಯಾಪಕರು ಸಾಹಿತ್ಯ, ಸಾಮಾಜಿಕಶಾಸ್ತ್ರ ಮೊದಲಾದ ಶಾಖೆಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಆಯ್ದುಕೊಂಡು ಶಾಸ್ತ್ರಸಮ್ಮತವಾದ ಸರಣಿಯಲ್ಲಿ, ಜನಸಾಮಾನ್ಯರಿಗೆ ತಿಳಿಯುವ ಶೈಲಿಯಲ್ಲಿ ಈ ಶಿಬಿರಗಳಲ್ಲಿ ಉಪನ್ಯಾಸಗಳನ್ನು ಕೊಡುತ್ತಾರೆ. ವಿಶ್ವವಿದ್ಯಾಲಯದ ಜ್ಞಾನ ಭಂಡಾರದ ಅಲ್ಪಾಂಶವನ್ನಾದರೂ ಮಹಾಜನರ ಮನೆ ಬಾಗಿಲಿಗೆ ಒಯ್ದು ಮುಟ್ಟಿಸಬೇಕೆಂದು ಮಾಡಿದ ಈ ಪ್ರಯತ್ನಕ್ಕೆ ನಮ್ಮ ನಿರೀಕ್ಷೆಗೆ ಮೀರಿದ ಮೆಚ್ಚಿಕೆಯೂ, ಪ್ರೋತ್ಸಾಹವೂ ದೊರೆಯುತ್ತಿವೆ. ಜನರು ತಾವಾಗಿಯೇ ಮುಂದೆ ಬಂದು ತಮ್ಮ ತಮ್ಮ ಊರುಗಳಲ್ಲಿ ಈ ಉಪನ್ಯಾಸಗಳನ್ನು ಏರ್ಪಡಿಸಲು ವಿಶ್ವವಿದ್ಯಾಲಯಕ್ಕೆ ಬರೆದು ಬಿನ್ನವಿಸಿ ಕೊಳ್ಳುತ್ತಿರುವುದು ನಿಜವಾಗಿಯೂ ಸಂತೋಷದ ಸಂಗತಿಯಾಗಿದೆ.

ಈ ಜ್ಞಾನ ಪ್ರಸಾರ ಕಾರ್ಯದಲ್ಲಿ ಭಾಗವಹಿಸುವದರಿಂದ ವಿಶ್ವವಿದ್ಯಾಲಯದ ಹಾಗೂ ಕಾಲೇಜುಗಳ ಅಧ್ಯಾಪಕರಿಗೆ ಆಯಾ ಪ್ರದೇಶದ ಜನತೆಯೊಡನೆ ಹೆಚ್ಚಿನ ಸಂಪರ್ಕ ಒದಗುವದಲ್ಲದೆ ಎಂತಹ ವಿಷಯವನ್ನಾದರೂ ಕನ್ನಡದಲ್ಲಿ ತಿಳಿಸಿ ಹೇಳುವ ಹಾಗೂ ಅದನ್ನು ಸುಲಭ ಶೈಲಿಯಲ್ಲಿ ಬರವಣಿಗೆಯಲ್ಲಿಳಿಸುವ ಅವಕಾಶ ದೊರೆಯುತ್ತದೆ. ಈ ಕಾರ್ಯದಲ್ಲಿ ಅವರೆಲ್ಲರೂ ಮನಮುಟ್ಟಿ ಸಹಕರಿಸುತ್ತಿರುವುದು ಶ್ಲಾಘನೀಯ.

ಈ ಮಾಲೆಯಲ್ಲಿ ಈಗಾಗಲೇ ೩೯ ಪುಸ್ತಿಕೆಗಳು ಪ್ರಕಟವಾಗಿವೆ. ಅವು ಅಚ್ಚಾಗಿ ಹೊರ ಬಂದೊಡನೆ ಅವುಗಳ ಸಾವಿರಾರು ಪ್ರತಿಗಳನ್ನು ಜನರು ಕೊಂಡು ಓದುತ್ತಾರೆ. ಅನೇಕ ಪುಸ್ತಿಕೆಗಳು ನಾಲ್ಕು ಐದು ಮುದ್ರಣಗಳನ್ನು ಕಂಡಿರುವುದು ಈ ಮಾಲೆಯ ಉಪಯುಕ್ತತೆಯನ್ನೂ, ಜನಪ್ರಿಯತೆಯನ್ನೂ ವ್ಯಕ್ತಗೊಳಿಸುತ್ತದೆ. ಇದು ನಾಡಿನ ಪ್ರಗತಿಯ ಚಿಹ್ನೆಯೆಂದು ಭಾವಿಸುತ್ತೇನೆ.

ವಿಶ್ವವಿದ್ಯಾಲಯದ ಈ ಸೇವೆಯ ಸಂಪೂರ್ಣ ಪ್ರಯೋಜನ ಪಡೆದು ಸಾಮಾನ್ಯ ಜನತೆ ನಾಡಿನ ಸರ್ವತೋಮುಖ ಪ್ರಗತಿಯಲ್ಲಿ ಪಾಲುಗೊಳ್ಳಲೆಂದು ಹಾರೈಸುತ್ತೇನೆ.

ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

**ಜಿ. ಕೆ. ನಾರಾಯಣ ರೆಡ್ಡಿ**
ಕುಲಪತಿಗಳು

# ಅರಿಕೆ

ಕರ್ನಾಟಕ ವಿಶ್ವವಿದ್ಯಾಲಯವು ಉತ್ತರ ಕನ್ನಡ ಜಿಲ್ಲೆಯ ಬಾಕಿಕೊಡ್ಲದಲ್ಲಿ ಏರ್ಪಡಿಸಿದ ೩೬೮ನೆಯ ಉಪನ್ಯಾಸ ಶಿಬಿರದೊಳಗೆ, **'ಕವಿ-ಕರ್ಮಯೋಗಿ ದಿನಕರ ದೇಸಾಯಿ'** ಎಂಬ ವಿಷಯದ ಮೇಲೆ ನಾನು ಮಾಡಿದ ಭಾಷಣವು ಈಗ ಪುಸ್ತಕರೂಪ ತಳೆದು ಹೊರಬರುತ್ತಿದೆ. ವಿಶ್ವವಿದ್ಯಾಲಯದ ವ್ಯಾಸಂಗ ವಿಸ್ತರಣ ಗ್ರಂಥಮಾಲೆಯ ಹೂಗಳಲ್ಲಿ ಒಂದಾಗಿ ಈ ಕೃತಿ ಓದುಗರ ಕೈಸೇರುತ್ತಿರುವುದಕ್ಕಾಗಿ ಸಂತೋಷಪಡುತ್ತೇನೆ. ಇದಕ್ಕೆ ಮುಖ್ಯ ಕಾರಣಕರ್ತರಾದ ವಿಶ್ವವಿದ್ಯಾಲಯದ ಹಿರಿಯ ಅಧಿಕಾರಿಗಳನ್ನೂ, ಪ್ರಸಾರಾಂಗ ವಿಭಾಗದ ನಿರ್ದೇಶಕ ಶ್ರೀ ಎಸ್. ಬಿ. ನಾಯಕ ಅವರನ್ನೂ ಕೃತಜ್ಞತೆಗಳೊಂದಿಗೆ ಸ್ಮರಿಸದಿರಲಾರೆ.

'ದಿನಕರ ದೇಸಾಯಿ' ಉತ್ತರ ಕನ್ನಡವು ನಾಡಿಗೆ ನೀಡಿದ ಹಿರಿಯ ಚೇತನ. ಅವರ ಸೇವಾಜೀವನ ಅತ್ಯಂತ ಪರಿಶುದ್ಧವಾದುದು. ಅವರ ಜನಪರ ಧೋರಣೆ ಮತ್ತು ಕ್ರಿಯೆ ಅನ್ಯಾದೃಶವಾದುದು. ರೈತ-ಕಾರ್ಮಿಕರ ಹಿತಚಿಂತಕನಾಗಿ, ದೀನ-ದಲಿತರ ಕೈವಾರಿಯಾಗಿ, ನಿರ್ಭೀತ ನಿಷ್ಪಕ್ಷಪಾತ ಪತ್ರಿಕೋದ್ಯಮಿಯಾಗಿ, ಶ್ರೇಷ್ಠ ಶಿಕ್ಷಣತಜ್ಞನೂ ಪ್ರಸಾರಕನೂ ಆಗಿ, ಅಭಿಜಾತ ಕವಿಯಾಗಿ ಮತ್ತು ಪ್ರಜಾಸತ್ತೆಯ ಕಾವಲುಗಾರನಾಗಿ ಅವರು

ಸಲ್ಲಿಸಿದ ನಾಲ್ಕು ದಶಕಗಳನಿಷ್ಕಲ್ಮಶ-ನಿರಂತರ ಸೇವೆ ವರ್ತಮಾನಕ್ಕೆ ಮತ್ತು ನಾಳೆಯ ಪೀಳಿಗೆಗೆ ಮಾರ್ಗದರ್ಶಿಯಾದುದು.

ದಿನಕರ ದೇಸಾಯರು ಸಂಘಟಿಸಿದ ಸಮಾಜವಾದೀ ಆಂದೋಲನದಲ್ಲೂ, ಕಟ್ಟಿ-ಬೆಳೆಸಿದ ಶಿಕ್ಷಣ ಸಂಸ್ಥೆಗಳಲ್ಲೂ ಎರಡು ದಶಕಗಳಿಗಿಂತ ಹೆಚ್ಚು ಕಾಲ ಅವರ ಅತ್ಯಂತ ಸಮೀಪದ ಕಾರ್ಯಕರ್ತರಲ್ಲಿ ಒಬ್ಬನಾಗಿ ದುಡಿಯುವ ಸದವಕಾಶ ನನ್ನದಾಗಿತ್ತು. ಅವರ ಸಾರ್ವಜನಿಕ ಬದುಕನ್ನು ನನ್ನ ಬಾಲ್ಯದಿಂದಲೂ ಗಮನಿಸುತ್ತಾ ಬಂದಿದ್ದೇನೆ. ಅರ್ಥಮಾಡಿಕೊಳ್ಳಲು ಪ್ರಯತ್ನಿಸಿದ್ದೇನೆ. ಬದುಕಿನ ಉದ್ದಕ್ಕೂ ಪ್ರಸಿದ್ಧಿ-ಪ್ರಚಾರಗಳಿಂದ ದೂರವೇ ಉಳಿದ ದಿನಕರರ ಸೇವಾಜೀವನದ ವಿವಿಧ ಮಜಲುಗಳನ್ನೂ, ನಂಬಿ-ನಡೆದ ಸಿದ್ಧಾಂತಗಳನ್ನೂ, ಸಾಹಿತ್ಯದ ವೈಶಿಷ್ಟ್ಯವನ್ನೂ ಪರಿಚಯಿಸುವ-ತಕ್ಕಮಟ್ಟಿಗೆ ದೊಡ್ಡದೇ ಆದ -ಗ್ರಂಥವೊಂದನ್ನು ಬರೆದು ಪ್ರಕಟಿಸುವ ಸಿದ್ಧತೆಯಲ್ಲಿ ನಾನಿರುವಾಗಲೇ ಕರ್ನಾಟಕ ವಿಶ್ವವಿದ್ಯಾಲಯದ ಪ್ರಸಾರಾಂಗ ವಿಭಾಗದವರು ಮೇಲೆ ಉಲ್ಲೇಖಿಸಿದ ಉಪನ್ಯಾಸಕ್ಕೆ ನನ್ನನ್ನು ಆಮಂತ್ರಿಸಿ ಪೂರ್ವಭಾವಿಯಾಗಿ ಈ ಚಿಕ್ಕ ಹೊತ್ತಿಗೆ ಬೆಳಕು ಕಾಣುವಂತೆ ಮಾಡಿದ್ದಾರೆ. ಮಾನ್ಯ ಓದುಗರು ಇದರ ಪ್ರಯೋಜನ ಪಡೆಯುವರೆಂದು ನಂಬಿದ್ದೇನೆ.

ವಿಷ್ಣು ನಾಯ್ಕ

ಅಂಕೋಲಾ
೪-೬-೧೯೮೮

# ಪರಿವಿಡಿ


| | | ಪುಟ |
|---|---|---|
| | ಮುನ್ನುಡಿ | iii |
| | ಅರಿಕೆ | v |
| ೧. | ಪರಿಚಯ | ೧ |
| ೨. | ಬಾಲ್ಯ–ಮನೆತನ | ೧ |
| ೩. | ವಿದ್ಯಾಭ್ಯಾಸ | ೩ |
| ೪. | ಸೇವಾ ಜೀವನಕ್ಕೆ ಪದಾರ್ಪಣೆ | ೬ |
| ೫. | ಸತ್ವಪರೀಕ್ಷೆಯ ಸಂದರ್ಭ | ೮ |
| ೬. | ಕಾರ್ಮಿಕರ ನಾಯಕ | ೧೦ |
| ೭. | ರೈತಜನ ನಾಯಕ | ೧೨ |
| ೮. | ಹಾವಳಿ ಮಂಜನ ಹದ್ದುಪಾರು | ೧೬ |
| ೯. | ಬರಗಾಲ ಪರಿಹಾರ ಸಮಿತಿ ಕಾರ್ಯದರ್ಶಿಯಾಗಿ | ೧೮ |
| ೧೦. | ಆದರ್ಶ ಪತ್ರಿಕೋದ್ಯಮಿ | ೨೦ |
| ೧೧. | ಶಿಕ್ಷಣತಜ್ಞ ಹಾಗೂ ಪ್ರಸಾರಕ | ೨೩ |
| ೧೨. | ಶುದ್ಧ ರಾಜಕಾರಣಿ | ೨೭ |
| ೧೩. | ಉತ್ತಮ ಸಂಸದೀಯ ಪಟು | ೩೦ |

೧೪. ಕವಿ ದಿನಕರ ದೇಸಾಯಿ ೩೧

೧೫. ಸುಂದರ ಗದ್ಯ ೩೪

೧೬. ಕೊಂಕಣಿ ಹಾಡುಗಳು ೩೬

೧೭. ಕಾವ್ಯದ ಹಿರಿಮೆ ೩೯

೧೮. ಸಮಾಜವಾದಿ ಧೋರಣೆ-ದಲಿತಪ್ರಜ್ಞೆ ೪೩

೧೯. ಕನ್ನಡದ ಮೊದಲ ಬಂಡಾಯ ಕವಿ ೪೯

೨೦. ಮಕ್ಕಳ ಕವಿಯಾಗಿ ೫೩

೨೧. ಅಭಿನವ ಸರ್ವಜ್ಞ ೫೫

೨೨. ವಾಸ್ತವವಾದಿ-ಮಾನವತಾವಾದಿ ೬೧

೨೩. ಉತ್ತರ ಕನ್ನಡದ ಹಂಬಲ ೬೫

೨೪. ಪ್ರಚಾರಕ್ಕೆ ಒಪ್ಪದ ಜೀವ ೬೭

೨೫. ಕೊನೆಯ ಮಾತು ೭೧

ಅನುಬಂಧ ೭೧

ಒಪ್ಪೋಲೆ ೭೬

## ೧. ಪರಿಚಯ

ದೀನ–ದಲಿತರ ಹಿತಚಿಂತಕ,ರೈತ–ಕಾರ್ಮಿಕರ ನಾಯಕ, ಶಿಕ್ಷಣತಜ್ಞ, ಸಂಸದೀಯ ಪಟು. ಪತ್ರಿಕೋದ್ಯಮಿ, 'ಅಭಿನವ ಸರ್ವಜ್ಞ' ಖ್ಯಾತಿಯ ಕವಿವರ ದಿನಕರ ದೇಸಾಯಿ ಇಂದು ನಮ್ಮ ಮುಂದೆ ಇಲ್ಲ. ಆದರೆ, ಅವರ ಜೀವಿತ ಕಾಲಾವಧಿಯಲ್ಲಿ ಮಾಡಿದ ಸಾಧನೆಗಳ ಜೀವಂತ ದಾಖಲೆಗಳು ಇಂದು ನಮ್ಮ ಮುಂದೆ ಇವೆ. ಅವರ ಸಾಹಿತ್ಯಸೇವೆ ಎಷ್ಟು ದೊಡ್ಡದೋ ಅದಕ್ಕಿಂತಲೂ ಮಿಗಿಲಾದದ್ದು ಅವರು ಬದುಕಿದ ರೀತಿ. ಬಾಯಿಲ್ಲದ ಬಡ ಜನತೆಗಾಗಿ ಅವರಂತೆ ದುಡಿದವರು ಈ ದೇಶದಲ್ಲಿ ಬಹಳ ಇಲ್ಲ. ಯಾವ ಲೆಕ್ಕದಲ್ಲಿ ಅಳತೆ ಮಾಡಿದರೂ ಅಪ್ಪಟ ಜನಪರ ವ್ಯಕ್ತಿ.

## ೨. ಬಾಲ್ಯ-ಮನೆತನ

ಹುಟ್ಟಿದ್ದು ೧೯೦೯, ಸಪ್ಟೆಂಬರ್ ೧೦ ರಂದು, ಅಜ್ಜಿ ಮನೆಯಿರುವ ಅಂಕೋಲೆಗೆ ಸಮೀಪದ ಹೊನ್ನೇಕೇರಿಯಲ್ಲಿ. ಬಾಲ್ಯ ಕಳೆದದ್ದು ತಂದೆ ಕಾಯಮ್ಮಾಗಿ ವಸತಿಮಾಡಿದ ಸಮೀಪದ ಅಲಗೇರಿಯಲ್ಲಿ. ಮೂಲತ: ಕುಮಟಾ ತಾಲೂಕಿನ ಹೊಂಡದಕ್ಕಲಿನ ದೇಸಾಯಿ ಮನೆತನಕ್ಕೆ ಸೇರಿದವರು. ತಾಯಿ ಅಂಬಿಕಾ. ತಂದೆ ದತ್ತಾತ್ರೇಯ ಸಾಂಬ ದೇಸಾಯಿ ಆದರ್ಶ ಶಿಕ್ಷಕರೆಂದು ಆ ಕಾಲದಲ್ಲಿ ಹೆಸರಾದವರು. ಮಕ್ಕಳೆಲ್ಲರೂ 'ದತ್ತಣ್ಣ' ಎಂದೇ ಕರೆದು ರೂಢಿ. ಅಲಗೇರಿಯ ಒಂದು ಏಕೋಪಾಧ್ಯಾಯ ಕನ್ನಡ ಪ್ರಾಥಮಿಕ ಶಾಲೆಯಲ್ಲಿ ಶಿಕ್ಷಕರಾಗಿದ್ದ ತಂದೆ 'ದತ್ತಣ್ಣ'ನಿಗೆ ಆಗ ಏಳು ರೂಪಾಯಿ ಮಾಸಿಕ

ವೇತನ. ಅಷ್ಟರಲ್ಲೇ ಮೂವರು ಮಕ್ಕಳನ್ನೂ ಒಬ್ಬ ಮಡದಿಯನ್ನೂ ಸಾಕಬೇಕಾಗಿತ್ತು. ದಿನಕರರಿಗೆ ಇಬ್ಬರು ಅಣ್ಣಂದಿರು, ದೊಡ್ಡವನು ಯಶವಂತ ಎರಡನೆಯವನು ಶಂಕರ. ದಿನಕರರು ಒಂಬತ್ತು ವರ್ಷದವರಿದ್ದಾಗ (೧೯೧೮)ಊರಲ್ಲೆಲ್ಲ ಭಯಂಕರ ಇನ್‌ಫ್ಲೂಯೆಂಜಾ ಜ್ವರ ಹಬ್ಬಿತ್ತು. ಆ ಕಾಹಿಲೆಗೆ ಇವರ ತಾಯಿ ಬಲಿಯಾದರು. ಬಾಲಕ ದಿನಕರ ಸುದೈವದಿಂದ ಪಾರಾಗಿದ್ದ.

ಇವರ ಅಜ್ಜನಿಗೆ (ಸಾಂಬ ದೇಸಾಯಿ) ಅಕ್ಷರಾಭ್ಯಾಸ ಇರಲಿಲ್ಲ. ಓದಿಸಬೇಕೆಂದು ಅವರ ತಂದೆ ಒಬ್ಬ ಪ್ರೈವೇಟ್ ಮಾಸ್ತರರನ್ನು (ಆಗ ಹೊಂಡದಕ್ಕಲಿನಲ್ಲಿ ಶಾಲೆ ಇರಲಿಲ್ಲ) ಗೊತ್ತುಮಾಡಿದ್ದರು. ಪಾಠ ಹೇಳಿಕೊಡುವುದಕ್ಕೆ ಬಂದ ಆ ಮಾಸ್ತರರಿಗೇ ಇವರ ಅಜ್ಜ ಒಂದು ತಪರಾಕಿ ಹಾಕಿದ್ದರಿಂದ (ಕಪಾಳಕ್ಕೆ ಹೊಡೆದದ್ದರಿಂದ) ಅವನ ಓದು ಅಲ್ಲಿಗೇ ನಿಂತಿತ್ತಂತೆ.

ಇವರ ಅಜ್ಜಿ ಕಾರವಾರ ತಾಲೂಕಿನ ಮಾಜಾಳಿಯ ವಾಗಳಿ ಕುಟುಂಬದವಳು. ಈ ಅಜ್ಜ-ಅಜ್ಜಿಯರ ಮದುವೆಯ ಸಂದರ್ಭದಲ್ಲಿ ನಡೆದ ಒಂದು ಮೋಜನ್ನು ದಿನಕರರು ಪದೇ ಪದೇ ತಮ್ಮ ಬಿಡುವಿನ ವೇಳೆಯಲ್ಲಿ ನೆನೆದು ನಗುತ್ತಿದ್ದುದುಂಟು. ಹೊಂಡದಕ್ಕಲಿನಿಂದ ಮದುವೆಯ ದಿಬ್ಬಣ ಮಾಜಾಳಿಗೆ ಹೋಗುವಾಗ ಸಾಂಬ ದೇಸಾಯರ ಮನೆಯ ಆಜೂಬಾಜಿನ ಹಾಲಕ್ಕಿ ಒಕ್ಕಲಿಗರೆಲ್ಲ ಹೋಗಿದ್ದರಂತೆ. ಹೆಣ್ಣಿನ

ಮನೆಯಲ್ಲಿ 'ಅವಲಾಟಿ' (ಅವಲಕ್ಕಿ ಮಾಡುವ ಲಾಟಿ) ಇರುವು ದನ್ನು ನೋಡಿ ಹಾಲಕ್ಕಿಗಳು ಮದುವೆಯ ಮನೆಯಲ್ಲಿ ನೀರನ್ನೂ ಮುಟ್ಟದೆ ತಿರುಗಿ ಬರಲು ಪ್ರಾರಂಭಿಸಿದರಂತೆ. ದೊಡ್ಡ ಜಮೀನ್ದಾರಿ ದೇಸಾಯಿ ಮನೆತನದಲ್ಲಿ ಹುಟ್ಟಿ 'ಅವಲಾಟಿ'ಯಿರುವ ಬಡ ಕುಟುಂಬದ ಹೆಣ್ಣನ್ನು ಯಾಕೆ ತರ-ಬೇಕಾಗಿತ್ತು?... ಅವರ ಕಿಮ್ಮತ್ತೇನು, ಇವರ ಕಿಮ್ಮತ್ತೇನು?... ಎಂಬುದು ಮುಗ್ಧ ಹಾಲಕ್ಕಿಗಳ ವಾದವಾಗಿತ್ತಂತೆ.

ದಿನಕರರ ತಂದೆ ಕಲಿತದ್ದು ಮುಲ್ಕಿವರೆಗೆ ಮಾತ್ರ. ಆಗಿನ ಕಾಲದಲ್ಲಿ ಮುಲ್ಕಿ ಪಾಸಾದರೆ ಪೋಲೀಸ್ ಡಿಪಾರ್ಟಮೆಂಟು ಕರೆದು ನೌಕರಿ ಕೊಡುತ್ತಿತ್ತು. ಅಲ್ಲಿ ಸಂಬಳವೂ ಹೆಚ್ಚಿದ್ದರಿಂದ ಬಹಳಷ್ಟು ಜನ ಪೋಲೀಸ್ ಡಿಪಾರ್ಟಮೆಂಟ್ ಸೇರುವಂತೆ ಇವರ ತಂದೆಗೆ ಸಲಹೆ ನೀಡಿದ್ದೂ ಇತ್ತು. ಆದರೆ ಶ್ರೀ ಆರ್. ಎಸ್. ಶಿವರಾಯ ಎನ್ನುವವರ ಮನೆಯ ಹೆಂಗಸರೆಲ್ಲ ಸೇರಿ, 'ಆ ಕೆಟ್ಟ ಡಿಪಾರ್ಟಮೆಂಟ್ ಸೇರಬೇಡ' ಎಂದು ಹಟತೊಟ್ಟು ಹೇಳಿದ್ದರಿಂದ ಇವರ ತಂದೆ ಮಾಸ್ತರಕಿ ಕೆಲಸಕ್ಕೆ ಅರ್ಜಿ ಹಾಕಿದ ರಂತೆ. ಪ್ರಾರಂಭದ ನೇಮನೂಣಕಿ ಅಂಕೋಲೆಗೆ ಸಮೀಪದ ಮಂಜಗುಣಿಯಲ್ಲಿ, ಆಮೇಲೆ ಅಲಗೇರಿಗೆ ಬಂದವರು ಹೆಚ್ಚು ಕಡಿಮೆ ಎಲ್ಲ ಸರ್ವೀಸನ್ನೂ ಅಲಗೇರಿ ಶಾಲೆಯಲ್ಲೇ ಕಳೆದರು.

## ೩. ವಿದ್ಯಾಭ್ಯಾಸ :

ದಿನಕರನ ಪ್ರಾಥಮಿಕ ಓದು ತಂದೆ ಕೆಲಸ ಮಾಡುತ್ತಿದ್ದ ಪ್ರಾಥಮಿಕ ಶಾಲೆಯಲ್ಲೇ ಸಾಗಿತ್ತು. ಒಂದನೇ ವರ್ಗದಲ್ಲಿದ್ದಾಗ

ಒಳ್ಳೆಯ ಪಾಟ್ಲೋನ್ ಹಾಕಿಕೊಂಡ ಫರ್ನಾಂಡಿಸ್ ಎಂಬ ಹೆಸರಿನ ಇನಸ್ಪೆಕ್ಟರರು ಮೇಲಿಂದ ಮೇಲೆ ಶಾಲೆಗೆ ಬರುತ್ತಿದ್ದುದನ್ನು ದಿನಕರ ದೇಸಾಯಿ ಆಗಾಗ ನೆನಪು ಮಾಡಿ ಕೊಳ್ಳುತ್ತಿದ್ದುದುಂಟು. ಒಮ್ಮೆ ಅವರು ಬಂದು, 'ಆನಂದ', 'ಮಗಳು', 'ಕನಸು'__ಎಂಬ ಈ ಮೂರು ಶಬ್ದಗಳನ್ನು ಬರೆದು ತೋರಿಸಲು ಹೇಳಿದರಂತೆ. ಇವರು ಬರೆದುದರಲ್ಲಿ 'ಆನಂದ' ಎಂಬ ಶಬ್ದವು 'ಆನದ' ಎಂದಾಗಿತ್ತಂತೆ. ಆದರೂ ಇನಿಸ್ಪೆಕ್ಟರರು 'ನೀನೊಬ್ಬನೇ ಪಾಸು' ಎಂದರಂತೆ. ಯಾಕಂದರೆ ಉಳಿದ ಮಕ್ಕಳು ಎರಡು ಅಥವಾ ಎರಡಕ್ಕಿಂತ ಹೆಚ್ಚು ತಪ್ಪುಗಳನ್ನು ಮಾಡಿದ್ದರು. ದಿನಕರ ಮಾತ್ರ ಮೂರರಲ್ಲಿ ಒಂದೇ ತಪ್ಪು ಮಾಡಿದ್ದ.

ದಿನಕರರ ಮಾಧ್ಯಮಿಕ ಶಿಕ್ಷಣ ಅಂಕೋಲಾದ ಎಡ್ವರ್ಡ್ ಹೈಸ್ಕೂಲ್ (ಈಗಿನ ಜೈಹಿಂದ್ ಹೈಸ್ಕೂಲ್) ಹಾಗೂ ಕಾರವಾರದ ಗವರ್ನ್‌ಮೆಂಟ್ ಹೈಸೂಲುಗಳಲ್ಲಿ ನಡೆಯಿತು. ಮುಂದೆ ಇಂಟರ್‌ಮೀಡಿಯಟ್‌ವರೆಗೆ ಬೆಂಗಳೂರಲ್ಲೂ (ಈಗಿನ ಸರಕಾರಿ ಏಂಡ್ ಸೈನ್ಸ್ ಕಾಲೇಜ್ ಬೆಂಗಳೂರು,) ಬಿ. ಎ. ಓದನ್ನು ಮೈಸೂರಿನ ಮಹಾರಾಜಾ ಕಾಲೇಜಿನಲ್ಲೂ ಮುಗಿಸಿದರು. ಕನ್ನಡ. ರಾಜ್ಯಶಾಸ್ತ್ರ ಹಾಗೂ ಇತಿಹಾಸಗಳನ್ನು ತಮ್ಮ ಪದವಿ ತರಗತಿಗಳಿಗೆ ಮುಖ್ಯ ವಿಷಯಗಳನ್ನಾಗಿ ಆರಿಸಿಕೊಂಡರು. ಆಗ ಅವರಿಗೆ ಖ್ಯಾತನಾಮ ಸಾಹಿತ್ಯ ವಿದ್ವಾಂಸರಾದ ಟಿ. ಎಸ್. ವೆಂಕಣ್ಣಯ್ಯ, ಎ. ಸೀತಾರಾಮಯ್ಯ ವಿದ್ಯಾ ಗುರುಗಳಾಗಿ ಲಭಿಸಿದ್ದರೆ, ನವೋದಯ ಸಾಹಿತ್ಯದ ಆಚಾರ್ಯ

ಪುರುಷ ಬಿ. ಎಂ. ಶ್ರೀಕಂಠಯ್ಯನವರು ಕಾವ್ಯಗುರುಗಳಾಗಿದ್ದರು. ಬಿ. ಎ. ಅಂತಿಮ ಪರೀಕ್ಷೆಯಲ್ಲಿ ದಿನಕರ ದೇಸಾಯಿ ವಿಶ್ವವಿದ್ಯಾನಿಲಯಕ್ಕೆ ಸರ್ವಪ್ರಥಮರಾಗಿ, ಇತಿಹಾಸ ವಿಷಯದೊಳಗೆ ಪ್ರತಿಷ್ಠೆಯ ಕ್ಯಾಂಡಿ(Candy prize) ಪಾರಿತೋಷಕವನ್ನು ಗಳಿಸಿದರು.

ಬಿ. ಎ. ಮುಗಿದ ಮೇಲೆ ಮೊದಲ ವರ್ಷದ ಎಲ್. ಎಲ್. ಬಿ. ಹಾಗೂ ಎಂ. ಎ. ಓದಲು ಮುಂಬಯಿಗೆ ಹೊರಟರು. ಮೂರು ವರ್ಷಗಳಲ್ಲಿ ಎರಡು ಡಿಗ್ರಿಗಳನ್ನು ಪಡೆದರು. ಆಗ ಎಂ. ಎ. ಪದವಿ ಪಡೆಯುವವರು ಪರೀಕ್ಷೆಗಾದರೂ ಕೂಡ್ರಬಹುದು ಇಲ್ಲವೆ ಮಹಾಪ್ರಬಂಧ ಸಾದರಪಡಿಸಿ ಆ ಮೂಲಕ ಮಾಸ್ಟರ್ ಡಿಗ್ರಿ ಗಳಿಸಬಹುದಾಗಿತ್ತು. ದಿನಕರ ದೇಸಾಯಿ ಎರಡನೆಯ ನಿಯಮವನ್ನು ಆಯ್ದು ಕೊಂಡಿದ್ದರು.

ಮುಂಬಯಿಯ ಸೇಂಟ್ ಝೇವಿಯರ್ಸ್ ಕಾಲೇಜಿನ ಇತಿಹಾಸ ವಿಭಾಗದ ಮುಖ್ಯಸ್ಥರಾದ ಫಾದರ್ ಹೆರಾಸ್ ಎನ್ನುವವರು ದಿನಕರ ದೇಸಾಯಿ ಕರ್ನಾಟಕದವರಾಗಿದ್ದ ಕಾರಣ 'ಕಲ್ಯಾಣಿಯ ಚಾಲುಕ್ಯರ ಕೈಕೆಳಗಿನ ಮಹಾಮಂಡಲೇಶ್ವರ'ರ ಕುರಿತು '(The Mahamandaleshwaras under the Chalukyas of Kalyani') ಮಹಾಪ್ರಬಂಧ ಸಿದ್ಧಪಡಿಸುವಂತೆ ಅವರಿಗೆ ಸಲಹೆ ನೀಡಿದರು ಮಾತ್ರವೇ ಅಲ್ಲ, ಗ್ರಂಥಾಲಯದ ಬೀಗದ ಕೈಯನ್ನೇ ದೇಸಾಯಿ ಕೈಗೆ ಕೊಟ್ಟಿದ್ದರು. ನಿತ್ಯ ಮುಂಜಾನೆ ಹೋಗಿ ಗ್ರಂಥಾಲಯದಲ್ಲಿ ತಮ್ಮ ಸಂಶೋಧನಾ

ಕಾರ್ಯಕ್ಕಾಗಿ ಕಳಿತು ಕೊಳ್ಳುತ್ತಿದ್ದ ದೇಸಾಯಿ ತುಂಬಾ ಶ್ರಮವಹಿಸಿ ಅವನ್ನು ಸಿದ್ಧಪಡಿಸಿವರು.ಅದಕ್ಕೆ Saint Xavier Silver Medal (೧೯೩೩) ಬಂತು. ಎಂ. ಎ. ಡಿಗ್ರಿ ಸಂಪಾದಿಸಿದ ನಂತರ ಅವರು ತಮ್ಮ ಎರಡನೇ ವರ್ಷದ ಎಲ್. ಎಲ್. ಬಿ. ಯನ್ನೂ ದ್ವಿತೀಯ ಶ್ರೇಣಿಯಲ್ಲಿ (೧೯೩೪) ಮುಗಿಸಿದರು.

## ೪. ಸೇವಾ ಜೀವನಕ್ಕೆ ಪದಾರ್ಪಣ

ವಿದ್ಯಾರ್ಥಿ ದೆಸೆಯಲ್ಲೇ ಸಾಹಿತ್ಯದಲ್ಲಿ ವಿಶೇಷ ಆಸಕ್ತಿ ತಳೆದು ಆಗಲೇ ಉತ್ತಮ ಕವಿಯೆಂದೂ ಪ್ರಸಿದ್ಧಿ ಗಳಿಸಿದ ನೀವು ಪ್ರಾಧ್ಯಾಪಕ ವೃತ್ತಿ ಬಯಸದೆ ಅದು ಹೇಗೆ ಎಲ್.ಎಲ್. ಬಿ. ಮುಗಿಸಿ ವಕೀಲಿವೃತ್ತಿಗಿಳಿಯಲು ಮನಸ್ಸು ಮಾಡಿದಿರಿ ? ಎಂದು ನಾನು ದೇಸಾಯಿಯರನ್ನು ಒಮ್ಮೆ ನೇರವಾಗಿ ಪ್ರಶ್ನಿಸಿದ್ದೆ. ಅದಕ್ಕೆ ಅವರು ಕೊಟ್ಟ ಉತ್ತರದ ಸಾರ ಇಂತಿದೆ :

ದೇಸಾಯಿ ಎಲ್. ಎಲ್. ಬಿ. ಮಾಡಿದ್ದು Public Lifeನಲ್ಲಿ ಹೆಚ್ಚು ಆಸಕ್ತಿಯಿದ್ದುದರಿಂದ, ಬೆಳಗಾವಿಯಲ್ಲಿ Practice ಮಾಡಬೇಕೆಂದು ತೀರ್ಮಾನಿಸಿದ್ದರು. Practice ಮಾಡುವವರಿಗೆ ಆಗಿನ ಕಾಲದಲ್ಲಿ ಬೆಳಗಾವಿ ಒಳ್ಳೆಯ ಸ್ಥಳವಾಗಿತ್ತು. ದೇಸಾಯಿ ಕನ್ನಡ ಮತ್ತು ಮರಾಠಿ ಎರಡೂ ಭಾಷೆ ಬಲ್ಲವರಾದುದರಿಂದ ಬೆಳಗಾವಿಯನ್ನೇ ಆರಿಸಿಕೊಂಡಿದ್ದರು.

ಬೆಳಗಾವಿಯಲ್ಲಿ Practice ಮಾಡುವ ಉದ್ದೇಶದಿಂದ 'ಸನದು' ತೆಗೆದುಕೊಳ್ಳಲು ದೇಸಾಯಿ ಮುಂಬಯಿಗೆ ಹೋಗಿದ್ದರು. ಅದೇ ವೇಳೆಗೆ Servants of India Societyಯ

ಬಗ್ಗೆ ಪತ್ರಿಕೆಯಲ್ಲಿ ಒಂದು ಪ್ರಕಟಣೆ ಬಂದಿತ್ತು. ಭಾರತ ಸೇವಕ ಸಮಾಜದ ಆಜೀವ ಕಾರ್ಯಕರ್ತರಾಗಿ ಸೇರ ಬಯಸುವ ತರುಣರಿಗಾಗಿ ಅದರಲ್ಲಿ ಕರೆ ಕೊಡಲಾಗಿತ್ತು. ದಿನಕರರ ಮನಸ್ಸು ಆಕಡೆ ಸೆಳೆಯಲ್ಪಟ್ಟಿತು. ವಿವರಕ್ಕಾಗಿ ಮುಂಬಯಿ-ಯಲ್ಲಿ ಚೌಕಶಿ ಮಾಡಿದರು. ಶೇಷಗಿರಿ ಪಿಕಳೆಯವರ ಅಣ್ಣ ಅಪ್ಪಾ ಪಿಕಳೆ (ನರಹರಿ ಪಿಕಳೆ) ಅನ್ನುವವರು Servants of India Societyಯ ಕಚೇರಿಯೊಳಗೆ ಕಾರ್ಮಿಕ ಧುರೀಣ ಶ್ರೀ ಎನ್. ಎಂ. ಜೋಶಿಯವರ Part-time typist ಆಗಿ ಕೆಲಸ ಮಾಡುತ್ತಿದ್ದರು. ಅವರು ಸೊಸೈಟಿಯ ಧ್ಯೇಯ-ಧೋರಣೆಗಳ ಬಗ್ಗೆ ಇವರಿಗೆ ತಕ್ಕಮಟ್ಟಿಗೆ ವಿವರಣೆ ನೀಡಿದರು. ಅವರಿಂದ ಉತ್ತೇಜಿತರಾದ ದೇಸಾಯಿ ಎನ್. ಎಂ. ಜೋಶಿಯವರನ್ನು ಕಂಡು ತನ್ನ ಆಶೆಯನ್ನು ಹೇಳಿಕೊಂಡರು. ಜೋಶಿ ಆಗ ಸೆಂಟ್ರಲ್ ಎಸ್ಸೆಂಬ್ಲಿ ಮೆಂಬರರಾಗಿದ್ದರು. ಭಾರತೀಯ ಕಾರ್ಮಿಕರ ಧುರೀಣರಾಗಿ ಬ್ರಿಟಿಷ್ ಸರಕಾರದ ವಿರುದ್ಧ ಅನೇಕ ರೀತಿಯಲ್ಲಿ ಸಮರ ಸಾರಿದ್ದರೂ ಅವರಲ್ಲಿರುವ ಪ್ರಾಮಾಣಿಕ ಕಾಳಜಿ ಹಾಗೂ ಶಿಸ್ತನ್ನು ಮೆಚ್ಚಿ ಬ್ರಿಟಿಷ್ ಸರಕಾರ ಪ್ರತಿ-ಯೊಂದು ಅವಧಿಗೂ ಅವರನ್ನೇ ಸೆಂಟ್ರಲ್ ಎಸ್ಸೆಂಬ್ಲಿಗೆ ನೊಮಿನೇಟ್ ಮಾಡುತ್ತಿತ್ತು. ಎನ್. ಎಂ. ಜೋಶಿ ದೇಸಾಯಿ-ಯನ್ನು ದಿಲ್ಲಿಗೆ ಕರೆದುಕೊಂಡು ಹೋದರು. ಟೈಪಿಂಗ್ ಕಲಿ-ಯುವಂತೆ ತಮ್ಮ ಟೈಪ್‌ರೈಟರ್ ಕೊಟ್ಟರು ಪ್ರತಿನಿತ್ಯ ತಮ್ಮ ಜತೆ ಎಸ್ಸೆಂಬ್ಲಿ ಗ್ಯಾಲರಿಗೆ ಕರೆದುಕೊಂಡು ಹೋಗುತ್ತಿದ್ದರು. "ನೀನು ಇಲ್ಲಿ ನೋಡಿದ ಸಂಗತಿಯ ಬಗ್ಗೆ ಬರಿ" ಎಂದು ಹೇಳಿ-ದರು. '**ಎಸ್ಸೆಂಬ್ಲಿಯ ಗ್ಯಾಲರಿಯಿಂದ**' ಎಂಬ ತಲೆಬರಹ

ದೊಂದಿಗೆ ಪ್ರತಿದಿನದ ಕಾರ್ಯಕಲಾಪಗಳನ್ನು ಹುಬ್ಬಳ್ಳಿಯ 'ಸಂಯುಕ್ತ ಕರ್ನಾಟಕ' ದಿನಪತ್ರಿಕೆಗೆ ದಿನಕರರು ವರದಿ ಮಾಡ ತೊಡಗಿದರು. ಆ ಲೇಖನಗಳನ್ನು ಕನ್ನಡ ಬಲ್ಲ ಸೊಸೈಟಿಯ ಮದ್ರಾಸಿನ ಸದಸ್ಯರಾದ ವೆಂಕಟಸುಬ್ಬಯ್ಯನವರಿಗೆ ಜೋಶಿ-ಯವರು ಕೊಟ್ಟು ಅಭಿಪ್ರಾಯ ಕೇಳಿದರು. ವೆಂಕಟಸುಬ್ಬಯ್ಯ ನವರು ಬಹಳಷ್ಟು ಮೆಚ್ಚಿಗೆ ವ್ಯಕ್ತಪಡಿಸಿದ್ದರಿಂದ ಜೋಶಿ-ಯವರಿಗೆ ತುಂಬಾ ಖುಶಿಯಾಯಿತು.

ಹೀಗೆ ಮೊದಲ ಪರೀಕ್ಷೆಯಲ್ಲಿ ಯಶಸ್ವಿಯಾದ ದೇಸಾಯ ರನ್ನೂ ಇತರ ಐದು ಜನರನ್ನೂ ಭಾರತ ಸೇವಕ ಸಮಾಜದ ಆಜೀವ ಕಾರ್ಯಕರ್ತರಾಗಿ ತೆಗೆದು ಕೊಳ್ಳಲಾಯಿತು.–ಅದೂ ಒಂದು ವರ್ಷದ Probationary ಅವಧಿಗಾಗಿ. ಆಗ ಶ್ರೀ ಗೋಪಾಲಕೃಷ್ಣ ದೇವಧರ ಎನ್ನುವವರು ಸೊಸೈಟಿಯ ಅಧ್ಯಕ್ಷ ರಾಗಿದ್ದರು. ಮೊಟ್ಟಮೊದಲು ಪ್ರತಿಜ್ಞೆ ಸ್ವೀಕರಿಸಿದವರು ದಿನ ಕರ ದೇಸಾಯಿ.

## ೫. ಸತ್ವಪರೀಕ್ಷೆಯ ಸಂದರ್ಭ

ದಿನಕರ ದೇಸಾಯಿ Servants of India Society ಯ ಆಜೀವ ಸದಸ್ಯರಾಗಿ ಸೇರಿದ ತರುಣದಲ್ಲೇ ಒಂದೆರಡು ಸತ್ವ ಪರೀಕ್ಷೆಯ ಸಂದರ್ಭಗಳನ್ನೂ ಎದುರಿಸಬೇಕಾಗಿ ಬಂತು. ಗೋಕಾಕದಲ್ಲಿ ಕಾರ್ಖಾನೆಯ ಕಾರ್ಮಿಕರು ಸಂಪು ಹೂಡಿ ದ್ದರು. ಕಾರ್ಮಿಕ ಚಳವಳಿಯ ಪಿತಾಮಹರಾದ ಎನ್. ಎಂ. ಜೋಶಿ ಆ ಹೋರಾಟದ ಮೇಲ್ವಿಚಾರಣೆಗಾಗಿ, ದೇಸಾಯಿ ಕರ್ನಾಟಕದವರಾದ್ದರಿಂದ ಅವರನ್ನೇ ಕಳಿಸಿಕೊಟ್ಟರು.

ಗಿರಣಿ ಕಾರ್ಮಿಕರ ಹೋರಾಟದ ಏಳು-ಬೀಳುಗಳ ಬಗ್ಗೆ ಪ್ರತಿದಿನವೂ ದಿನಕರ ದೇಸಾಯಿ ಆಗ ದೆಹಲಿಯಲ್ಲಿದ್ದ ಜೋಶಿ ಯವರಿಗೆ ವರದಿ ಕಳಿಸಬೇಕಾಗಿತ್ತು. ಯಾವುದೋ ಒಂದು ವಿಷಯದಲ್ಲಿ ದೇಸಾಯರಿಗೆ ಜೋಶಿಯವರಿಂದ ಮಾರ್ಗ ದರ್ಶನ ಬೇಕಾಗಿ, ಅದನ್ನು ಕೇಳಿದಾಗ, 'ಗೋಕಾಕದಿಂದ ದೆಹಲಿ ಬಹಳ ದೂರವಿದೆ; ಸ್ಥಳದಲ್ಲಿರುವವನು ನೀನು, ನೀನೇ ನಿನ್ನ ಸ್ವಂತ ನಿರ್ಣಯ ತೆಗೆದುಕೊ' ಎಂಬ ಉತ್ತರ ಬಂತಂತೆ.

ಹೋರಾಟಕ್ಕೆ ಸಂಘಟನೆಯ ಬಲ ಬೇಕು. ಸಂಘಟನೆಗೆ ಹಣದ ಬಲ ಬೇಕು. ಈ ಹೊಣೆ ತರುಣ ದೇಸಾಯಿಯ ಮೇಲಿತ್ತು. ಧೈರ್ಯಗುಂದದೆ ದೇಸಾಯಿ ಗೋಕಾಕದಿಂದ ಪ್ರತಿನಿತ್ಯ ಧಾರವಾಡ, ಹುಬ್ಬಳ್ಳಿಯ ಕಡೆ ಬಂದು, ಅಲ್ಲಲ್ಲಿ ಬೀದಿ ಭಾಷಣಗಳನ್ನು ಮಾಡಿ, ಜನರನ್ನು ಆಕರ್ಷಿಸಿ, ಹೋರಾ ಟಕ್ಕಾಗಿ ಹಣ ಕೂಡಿಸಿದರು.

'ಕರ್ನಾಟಕದ ಸಿಂಹ' ಖ್ಯಾತಿಯ ಶ್ರೀ ಗಂಗಾಧರರಾವ್ ದೇಶಪಾಂಡೆ ಆಗ ಈ ಕಾರ್ಮಿಕ ಹೋರಾಟದ ವಿರೋಧಿ ಯಾಗಿದ್ದರು. ಪಂಡಿತ ಹೃದಯನಾಥ ಕುಂಜ್ರು ಅವರು ಸೊಸೈಟಿಯ ಅಧ್ಯಕ್ಷರಾಗಿದ್ದ ಕಾಲ ಅದು. ದೇಶಪಾಂಡೆ ಯವರು ಕುಂಜ್ರು ಅವರಿಗೆ ಪತ್ರ ಬರೆದು, ಕಾರ್ಮಿಕ ಆಂದೋಲನಕ್ಕೆ ದಿನಕರ ದೇಸಾಯಿ ನೀಡುತ್ತಿರುವ ಬೆಂಬಲ ವನ್ನೇ ಪ್ರಶ್ನಿಸಿದರು. ಪಂಡಿತ ಕುಂಜ್ರು ಅವರು ಆ ಬಗ್ಗೆ- ಸೊಸೈಟಿಯ ಉಪಾಧ್ಯಕ್ಷರೂ ಆಗಿದ್ದ ಎನ್. ಎಂ. ಜೋಶಿ

ಯವರ ಅಭಿಪ್ರಾಯ ಕೇಳಿದಾಗ, ಜೋಶಿಯವರು, ಗಂಗಾಧರ ರಾವ್ ದೇಶಪಾಂಡೆ ರಿಯಾಕ್ಷನರಿ ಇದ್ದಾನೆಂದೂ, ದಿನಕರ ದೇಸಾಯಿ ಮಾಡುತ್ತಿರುವ ಕೆಲಸ ಅತ್ಯಂತ ಮೌಲಿಕವಾದು-ದೆಂದೂ ಹೇಳಿ ಭಾರತ ಸೇವಕ ಸಮಾಜದ ಪ್ರತಿಯೊಬ್ಬ ಸದಸ್ಯನೂ ದೇಸಾಯಿ ನಡೆಸಿಕೊಂಡು ಹೋಗುತ್ತಿರುವ ಕಾರ್ಮಿಕ ಹೋರಾಟದ ಪ್ರಾಮಾಣಿಕ ಪ್ರಯತ್ನಕ್ಕೆ ಬೆಂಬಲ ನೀಡಬೇಕೆಂದೂ ಕೇಳಿಕೊಂಡರಂತೆ.

## ೬. ಕಾರ್ಮಿಕರ ನಾಯಕ

೧೯೩೬ರ ಸುಮಾರಿಗೆ ಟ್ರೇಡ್ ಯೂನಿಯನ್ ಲೀಡರ್ ಆಗಿ ಮುಂಬಯಿ ಪ್ರಾಂತದ ಸಾರ್ವಜನಿಕ ಜೀವನದಲ್ಲಿ ಪದಾ-ರ್ಪಣಮಾಡಿದ ದಿನಕರ ದೇಸಾಯಿ ಅಖಿಲ ಭಾರತ ಕಡಲ ಕೆಲಸಗಾರರ ಸಂಘವನ್ನು ಕಟ್ಟಿದಾಗ ಅದರ ಪ್ರಾಥಮಿಕ ಸದ-ಸ್ಯರು ಕೇವಲ ಏಳು ಜನ. ಮುಂದೆ ಅದು ಹತ್ತು ಸಾವಿರ ಸಂಖ್ಯೆಯನ್ನು ಮೀರಿ, ಭಾರತದಲ್ಲಿ ಮಾತ್ರವಲ್ಲ, ಅಂತರ್ ರಾಷ್ಟ್ರೀಯ ಮಟ್ಟದಲ್ಲೇ, ಒಂದು ಅತಿ ದೊಡ್ಡ ಸಂಘವಾಗಿ ಬೆಳೆಯಿತು. ಆ ಬೆಳವಣಿಗೆಯ ಹಿಂದೆ ದಿನಕರರ ಅಹೋ-ರಾತ್ರಿಯ ಪರಿಶ್ರಮ ಅಡಗಿತ್ತು. ಪ್ರಾರಂಭದಲ್ಲಿ ಆ ಮಹಾ ಸಂಘಟನೆಯ ಸಂಸ್ಥಾಪಕ ಕಾರ್ಯದರ್ಶಿಯಾಗಿದ್ದ ದೇಸಾ-ಯರು ಮುಂದೆ ಅದರ ಅಧ್ಯಕ್ಷರೂ ಆದರು.

ಸತತ ಇಪ್ಪತ್ತೈದು ವರ್ಷಗಳ ಅವಿರತ ಪರಿಶ್ರಮದ ಫಲವಾಗಿ ಈ ಸಂಘದ ಧ್ವನಿ ಅಂತರ್‌ರಾಷ್ಟ್ರೀಯ ವೇದಿಕೆಗಳ

ಮೇಲೂ ಕೇಳಿ ಬಂತು. ಡೆನ್ಮಾರ್ಕಿನ ಕೋಪನ್‌ಹೇಗನ್ನಿನಲ್ಲಿ ನಡೆದ ಅಂತರ್‌ರಾಷ್ಟ್ರೀಯ ಕಡಲ ಕಾರ್ಮಿಕರ ಮಹಾಸಮ್ಮೇಳನದಲ್ಲಿ ದಿನಕರ ದೇಸಾಯಿ ಭಾರತೀಯ ಕಾರ್ಮಿಕ ಸಂಘಗಳ ಪ್ರತಿನಿಧಿಯಾಗಿ ಪಾಲ್ಗೊಂಡು ಹಲವಾರು ಜ್ವಲಂತ ಸಮಸ್ಯೆಗಳ ಬಗ್ಗೆ ಜಗತ್ತಿನ ಕಣ್ಣು ತೆರೆಯಿಸಿದರು.

ತಮ್ಮ ಪ್ರವಾಸಾವಧಿಯಲ್ಲಿ ಬ್ರಿಟನ್ ದೇಶದೊಳಗೂ ಕೆಲ ಕಾಲ ತಂಗಿದ್ದು, ಭಾರತೀಯ ಕಾರ್ಮಿಕರನ್ನು ಬ್ರಿಟಿಷರು ನಡೆಸಿಕೊಳ್ಳುತ್ತಿರುವ ಅವಹೇಳನಕಾರಿ ರೀತಿಯ ಬಗ್ಗೆ ಅಲ್ಲಿಯ ಸರಕಾರವನ್ನು ತರಾಟೆಗೆ ತೆಗೆದುಕೊಂಡರು. ದೇಸಾಯರು ಅಂಕೆ-ಸಂಖ್ಯೆಗಳ ಆಧಾರಗಳೊಂದಿಗೆ ಬ್ರಿಟನ್ ಹಾಗೂ ಡೆನ್ಮಾರ್ಕ್ ಸರಕಾರಗಳ ಮುಂದೆ ಮಂಡಿಸಿದ ವಾದದ ಫಲವಾಗಿ ಅವೆರಡೂ ಸರಕಾರಗಳು ಭಾರತೀಯ ಕಾರ್ಮಿಕರ ಸ್ಥಿತಿಗತಿಯ ಸುಧಾರಣೆಗಾಗಿ ಅನೇಕ ಹೊಸ ಸವಲತ್ತುಗಳನ್ನು ಘೋಷಿಸಿದವು. ಇವೆಲ್ಲಾ ದೇಸಾಯರು ಬರೆದ 'ನಾ ಕಂಡ ಪಡುವಣ' ದಲ್ಲಿ ದಾಖಲಾಗಿವೆ.

ಕಾರ್ಮಿಕ ಸಂಘಟನೆಯನ್ನು ದಿನಕರ ದೇಸಾಯಿ ಅಗ್ಗದ ಪ್ರತಿಷ್ಠೆ ಇಲ್ಲವೆ ಪ್ರಸಿದ್ಧಿಗಾಗಿ ಕೈಕೊಂಡದ್ದಲ್ಲ. ಶ್ರಮಜೀವಿಗಳಿಗೆ ಅವರ ದುಡಿಮೆಗೆ ತಕ್ಕ ವೇತನ ಸಿಗಲೇಬೇಕೆಂಬುದು ದೇಸಾಯಿ ತಮ್ಮ ಬದುಕಿನುದ್ದಕ್ಕೂ ನಂಬಿ-ಪಾಲಿಸಿಕೊಂಡು ಬಂದ ಆದರ್ಶ.

ಅದು ಗೋಕಾಕದ ಗಿರಣಿಯ ಕಾರ್ಮಿಕರಿಗಾದ ಅನ್ಯಾಯವಿರಲಿ, ಮುಂಬಯಿಯ ಕಡಲ ಕಾರ್ಮಿಕರಿಗಾದ ವಂಚನೆ

ಯಿರಲಿ ಅಥವಾ ಉತ್ತರ ಕನ್ನಡದ ರೈತ-ಕಾರ್ಮಿಕರ ಸುಲಿಗೆಯು ಪ್ರಶ್ನೆಯೇ ಇರಲಿ, ಬೆವರಿಗೆ ತಕ್ಕ ಪ್ರತಿಫಲ ದುಡಿವ ಕೈಗಳಿಗೆ ಸಿಗದೇ ಇದ್ದಾಗ ಅಂಥ ಶೋಷಣೆಯ ವಿರುದ್ಧ ದಿನಕರರು ಉಗ್ರವಾದ ಪ್ರತಿಭಟನೆ ಮಾಡಿದ್ದುಂಟು. ಜನಶಕ್ತಿಯನ್ನು ಧನಶಕ್ತಿಯ ವಿರುದ್ಧ ಎತ್ತಿಕಟ್ಟಿದ್ದುಂಟು. ಹೋರಾಟದ ಮೂಲಕ ಬಂಡವಳಶಾಹಿ ವರ್ಗದ ಎದೆಗುಂಡಿಗೆ ಬಿರಿಯುವಂತೆ ಮಾಡಿದ್ದುಂಟು. ಆದರೆ ಎಲ್ಲವೂ ತರ್ಕಬದ್ಧವಾಗಿ. ಕರಾರುವಾಕ್ಕಾದ ಚೌಕಟ್ಟಿನಲ್ಲಿ. ವಿರೋಧಿ ಬಣಗಳೂ ಅಹುದಹುದೆನ್ನಬೇಕೆನ್ನುವ ರೀತಿಯಲ್ಲಿ.

## ೭. ರೈತಜನ ನಾಯಕ

ದಿನಕರ ದೇಸಾಯರ ಸಾರ್ವಜನಿಕ ಸೇವಾಜೀವನ ಮುಂಬಯಿಯಲ್ಲಿ ಪ್ರಾರಂಭವಾದರೂ ಅವರು ತಮಗೆ ಜನ್ಮ ಕೊಟ್ಟ ಜಿಲ್ಲೆ ಉತ್ತರ ಕನ್ನಡವನ್ನು ಮರೆಯಲಿಲ್ಲ.

೧೯೩೦ ರ ದಶಕವದು. ಆ ಕಾಲದಲ್ಲಿ ನಿರಕ್ಷರಿ ರೈತರ ಹಾಗೂ ನಿರ್ಗತಿಕ ರೈತ-ಕಾರ್ಮಿಕರ ಬೀಡಾಗಿತ್ತು ಉತ್ತರ ಕನ್ನಡ ಜಿಲ್ಲೆ. ಭೂಮಾಲಿಕರ ಮರ್ಜಿಯಂತೆ ಬದುಕಬೇಕಾಗಿದ್ದ ರೈತವರ್ಗ ಧ್ವನಿಯೆತ್ತುವ ನಾಲಗೆಯನ್ನೇ ಕಳೆದುಂಡಂತಿತ್ತು. ಉತ್ತರ ಕನ್ನಡದ ಆದಿವಾಸಿಗಳೆಂದೇ ಕರೆಯಲಾಗುವ ಬಡ ಹಾಲಕ್ಕಿ ಬಕ್ಕಲಿಗರಂತೂ ಅಕ್ಷರಶಃ ಗುಲಾಮರಂತೆ ಬದುಕುತ್ತಿದ್ದ ಕಾಲ ಅದು. ಸಂಕ್ಷಿಪ್ತದಲ್ಲಿ ಹೇಳುವುದಾದರೆ ಜೀತದಾಳುಗಳೋಪಾದಿಯಲ್ಲಿತ್ತು ರೈತರ ಬವಣೆ. ಆಗ ದಿನಕರ

ದೇಸಾಯಿ ಈ ಬಡ ಜನತೆಯ ಪಾಲಿಗೆ ಭರವಸೆಯ ಬೆಳಕಾಗಿ ಮೂಡಿ ಬಂದರು. ತಮ್ಮ ಸಂಗಡಿಗರಾದ ಶೇಷಗಿರಿ ಪಿಕಳೆ, ದಯಾನಂದ ನಾಡಕರ್ಣಿ ಹಾಗೂ ಇನ್ನೂ ಕೆಲವು ಸಮಾನ ಮನೋಧರ್ಮವುಳ್ಳ ಸಂಗಾತಿಗಳೊಂದಿಗೆ ರೈತರ ಪರವಾಗಿ ಭೂಮಾಲಿಕರ ವಿರುದ್ಧ ಸಮರದ ಕಿಡಿ ಹೊತ್ತಿಸಿದರು.

ರೈತರನ್ನು ಹೋರಾಟಕ್ಕೆ ಅಣಿಗೊಳಿಸುವಾಗ ದಿನಕರರು ಅನುಸರಿಸಿದ ಮಾರ್ಗವು ತೀರಾ ಭಿನ್ನವಾದದ್ದು. ಪ್ರತಿಯೊಂದೂ ಹಳ್ಳಿಯನ್ನು ಅವರು ಕಾಲ್ನಡಿಗೆಯಲ್ಲಿ ಸಂಚರಿಸಿದರು. ರಾತ್ರಿಗಳನ್ನು ಒಕ್ಕಲು ಮಕ್ಕಳ ಕೂಟ ಕಟ್ಟುವುದರಲ್ಲೇ ಕಳೆದರು. ಒಡೆಯಂದಿರನ್ನು ಘಟ್ಟಹತ್ತಿಸುವ ಮಾರ್ಗೋಪಾಯದ ಬಗ್ಗೆ ರೈತಕೂಟಗಳಲ್ಲಿ ಪ್ರತಿನಿತ್ಯ ಚರ್ಚಿಸಲಾಗುತ್ತಿತ್ತು. ತಮ್ಮ ಜನಪ್ರಿಯ ಕಾವ್ಯಮಾಧ್ಯಮವನ್ನು ಈ ಸಂಘಟನಾ ಕಾರ್ಯಕ್ಕಾಗಿ ದೇಸಾಯಿ ಬಳಸಿಕೊಂಡರು:

‘ಬೆಳಗಿನಿಂದ ಸಂಜೆಯವರೆಗೆ
ದುಡಿದೂ ಹೊಟ್ಟೆಗೆ ಇಲ್ಲವೊ ನಮಗೆ
ಒಡೆಯನಿಗಾಯ್ತು ಬೆಳೆಸಿದ ಭತ್ತ
ತೆಂಗಿನಕಾಯಿ ಮಡಲು ಕತ್ತ
ಏಳಿರಿ ಏಳಿರಿ ರೈತರೆ ಎಲ್ಲ
ಜಾಗೃತರಾಗಿರಿ ಊರೊಳಗೆಲ್ಲ
ಹಳ್ಳಿ ಹಳ್ಳಿಗೂ ಸಂಘವು ಬೇಕು
ಒಡೆಯರ ಅವಲಂಬಿಸಿರುವುದು ಸಾಕು’

'ರೈತರು ಕೂಟ ಕಟ್ಟಿದರೊ
ಒಡೆಯರು ಘಟ್ಟ ಹತ್ತಿದರೊ'

..................

'ನಮದೇ ಆದ ಈ ಭೂಮಿ
ನಮಗೇ ಆಗಲಿ ಹೇ ಸ್ವಾಮಿ'

..................

'ಯಾರಪ್ಪನ ಯಾರವ್ವಿಯ ಇಚ್ಛೆ
ಉತ್ತರ ಕನ್ನಡ ಜಿಲ್ಲೆಯ ಕಚ್ಛೆ ?'

..................

'ಕೆಂಪು ಬಾವುಟವು ರೈತನದೊ
ರಕ್ತ ಬಾವುಟವು ಬಡ ಕೂಲಿಯದೊ'

ಹೀಗೆ, ದೇಸಾಯಿಯರ ಜನಪರ ಹಾಡುಗಳು ಕೃಷಿಕಾರ್ಮಿಕರನ್ನು ಬಡಿದೆಬ್ಬಿಸಿ ಕೆಂಪು ಬಾವುಟದಡಿಯಲ್ಲಿ ಅವರೆಲ್ಲರನ್ನೊಂದಾಗಿಸಿದವು. ರೈತಕೂಟಗಳು ದಿನೇ ದಿನೇ ಬೆಳೆಯುತ್ತ ಹೋದವು. ಹೋರಾಟದ ಗೆಜ್ಜೆ ಕಟ್ಟಿ ಹೆಜ್ಜೆ ಕಲಿಸಿದರು.

ತಾವು ಸಂಘಟಿಸುತ್ತಿರುವ ಹೋರಾಟದ ವಿಚಾರದಲ್ಲಿ ದೇಸಾಯಿಯರಿಗೆ ಯಾವ ಸಂದಿಗ್ಧವೂ ಇರಲಿಲ್ಲ. ರೈತಕೂಟಗಳಲ್ಲಿ ಮತ್ತು ಬೃಹತ್ ಸಭೆಗಳಲ್ಲಿ ಅವರು ಸಾಮಾನ್ಯ ಅಜ್ಞಾನಿಗೂ ಅರ್ಥವಾಗುವ ಮಾಲೆನಲ್ಲಿ ವಿವರಿಸುತ್ತಿದ್ದರು. ಅವರ ಭಾಷಣದಲ್ಲಿ ಆಧಾರ ಸಂಖ್ಯೆಗಳೂ ತುಂಬಿರುತ್ತಿದ್ದವು.

"ಉತ್ತರ ಕನ್ನಡದಲ್ಲಿ ನೂರು ಎಕರೆಗಿಂತ ಹೆಚ್ಚು ಭೂಮಿಯಿರುವ ಒಡೆಯರ (ಭೂಮಾಲಿಕರ) ಸಂಖ್ಯೆ ೧೮೮.

ಈ ಜನರು ೬೯,೬೩೦ ಎಕರೆ ಭೂಮಿಯನ್ನು ಆಳುತ್ತಾರೆ. ಈ ಭೂಮಿಯಲ್ಲಿ ೧, ೮೧, ೨೩೯ ರೈತರು ಕೃಷಿ-ಕೂಲಿಕಾರರಾಗಿ 'ಗೇಣಿದಾರ' ಎಂಬ ಹೆಸರಿನಲ್ಲಿ ದುಡಿಯುತ್ತಿದ್ದಾರೆ. ಅಂದರೆ ಸರಾಸರಿ ಒಬ್ಬ ರೈತನಿಗೆ ಹತ್ತು ಗುಂಟೆ ಜಮೀನು (೧/೪ ಎಕರೆ) ಬರುತ್ತದೆ. ಈ ತುಂಡು ಭೂಮಿಯಲ್ಲಿ ವರ್ಷವಿಡೀ ದುಡಿದರೂ ಹುಟ್ಟಿಸಿದ ಕಾಳು ಮೊದಲು ಒಡೆಯನ ಮನೆಗೆ ಹೋಗಬೇಕು. ಒಡೆಯನ ದೋಣಿ ತುಂಬಿ ಹೆಚ್ಚು ಉಳಿದರೆ ರೈತ ಉಣ್ಣಬೇಕು. ಪ್ರತಿ ಎಕರೆಗೆ ಎಂಟು ಕಂಡಗ ಅಕ್ಕಿ ಒಡೆಯನಿಗೆ ಕೊಡಬೇಕೆಂಬ ನಿಯಮವುಂಟು. ಈ ನಿಯಮ ಮೀರಿದರೆ ಮನೆ ಜಪ್ತಾಗುತ್ತದೆ. ಯಾರಪ್ಪನ ಬೆಳೆ ? ಒಡೆಯ ದೇವರಿಗೆ ಅಳೆದು ಕೊಟ್ಟ ಮೇಲೆ ರೈತನಿಗೆ ಉಳಿಯುವುದೆಷ್ಟು ?" –ಇದು ದೇಸಾಯಿ ಕೇಳುವ ಪ್ರಶ್ನೆ.

ಆದ್ದರಿಂದ ಊಳುವವನೇ ನೆಲದ ಒಡೆಯನಾಗಬೇಕೆಂಬುದು ಇವರ ಬೇಡಿಕೆ. "ತಾನು ದುಡಿಯುವ ಹೊಲದ ಒಡೆತನ ಪಡೆಯುವುದು ರೈತನ ಜನ್ಮಸಿದ್ಧ ಹಕ್ಕು. ಈ ವಿಷಯದಲ್ಲಿ ಭೂಮಾಲಿಕರು ಹಟ ಮಾಡಬಾರದು. ಈಗಿರುವ ದುಬಾರಿ ಗೇಣಿ ಪದ್ಧತಿಯನ್ನು ೧/೩ ದಿಂದ ೧/೬ಗೆ, ೧/೬ ದಿಂದ ೧/೧೦ಕ್ಕೆ ಇಳಿಸುತ್ತ ಹೋಗಿ ಮುಂದೆ ಯಾರ್ಯಾರು ಯಾವ ಜಮೀನಿನಲ್ಲಿ ದುಡಿಮೆ ಮಾಡ್ತಾರೊ ಅವರಿಗೆ ಆ ಜಮೀನಿನ ಖಾತೆ ಹಾಕಿಕೊಡುವ ವ್ಯವಸ್ಥೆ ಆಗಬೇಕು. ಇದರಿಂದ ಮಧ್ಯಮ ವರ್ಗದ ಭೂಮಾಲಿಕರಿಗೆ ತೊಂದರೆಯಾಗದ ಹಾಗೆ ನೋಡಿಕೊಳ್ಳುವ ಜವಾಬ್ದಾರಿ ಸರಕಾರದ್ದು. ರೈತನ ತರ್ಫಿ-

ನಿಂದ ಸರಕಾರವು ಭೂಮಾಲಿಕರಿಗೆ ಒಂದೇ ಗಂಟಿನಲ್ಲಿ ಪರಿಹಾರ ನೀಡಲಿ" ಎನ್ನುತ್ತಿದ್ದರು.

## ೮. ಹಾವಳಿ ಮಂಜನ ಹದ್ದು ಪಾರು

ಅರ್ಧ ಶತಮಾನದಷ್ಟು ಹಿಂದೆ ದಿನಕರ ದೇಸಾಯಿ ಜನತೆ ಹಾಗೂ ಸರಕಾರದ ಮುಂದೆ ಇಟ್ಟ ಈ ವಸ್ತುಸ್ಥಿತಿ ಹಾಗೂ ಅದನ್ನು ಪರಿಹರಿಸಬಹುದಾದ ಪ್ರಗತಿಪರ ಸಲಹೆ ಅಂದಿನ ಸರಕಾರಕ್ಕಾಗಲಿ, ಭೂಮಾಲಿಕರಿಗಾಗಲಿ ಪಥ್ಯವಾಗಿರಲಿಲ್ಲ. ಅವರೆಲ್ಲ ದೇಸಾಯಿ ಮೇಲೆ ಕೆಂಡಕಾರಿದರು. ಭೂಮಾಲಿಕ-ರಂತೂ ದಿನಕರ ದೇಸಾಯಿಯರನ್ನು 'ಹಾವಳಿ ಮಂಜ' ಎಂದೇ ಕರೆದರು. ಆದರೆ ದೇಸಾಯಿ ಹೋರಾಟ ಮಾತ್ರ ಬೇಣಕ್ಕೆ ಬಿದ್ದ ಬೆಂಕಿಯಂತೆ ಜಿಲ್ಲೆಯುದ್ದಕ್ಕೂ ವ್ಯಾಪಿಸಿತ್ತು.

ಅದು ಎರಡನೆಯ ಮಹಾಯುದ್ಧದ ಆರಂಭಕಾಲ. ಆಂತರಿಕ ಹೋರಾಟವನ್ನು ಎಲ್ಲೆಡೆಯಲ್ಲಿಯೂ ಹತ್ತಿಕ್ಕಲಾಗುತ್ತಿತ್ತು. ಈ ಸಂದರ್ಭವನ್ನು ಶ್ರೀಮಂತ ಭೂಮಾಲಿಕರು ಚೆನ್ನಾಗಿ ಬಳಸಿಕೊಂಡರು. ದೇಸಾಯಿ ಚಳವಳಿಯ ವಿಧಾನವನ್ನು ಅತಿರಂಜಿತವಾಗಿ ಬಣ್ಣಿಸಿ, ಅದು ಬ್ರಿಟಿಷ್ ಆಡಳಿತದ ವಿರುದ್ಧ ಸಾರಿದ ಸಮರವೆಂದು ಸರಕಾರದ ಕಿವಿ ಊದಿದರು. Servants of India Societyಗೂ ದಿನಕರರ ವಿರುದ್ಧ ದೇಶದ್ರೋಹಿತನ ಹಾಗೂ ಅಶಾಂತಿ ನಿರ್ಮಾಣದ ಆಪಾದನೆಯ ಮಾರುದ್ದದ ಪಟ್ಟಿಯನ್ನೇ ಸಲ್ಲಿಸಿದರು. ದಿನಕರರ ಬಗ್ಗೆ, ಅವರ ಹೋರಾಟದ ಹಿಂದಿರುವ ತಾತ್ವಿಕ ಸಿದ್ಧಾಂತದ ಬಗ್ಗೆ

ನಂಬಿಕೆಯಿರುವ Servants of India Society, ಈ ಚಳ-ವಳಿಯ ಬಗ್ಗೆ ತಕರಾರು ಮಾಡಲಿಲ್ಲವಾದರೂ, ಬ್ರಿಟಿಷ್ ಸರಕಾರ ಮಾತ್ರ ಕೆಲವು ಶ್ರೀಮಂತ ಭೂಮಾಲಿಕರ ಚಿತಾವಣೆಗೆ ಒಳಗಾಗಿ ದೇಸಾಯರನ್ನು ೧೯೪೦ರಿಂದ ಐದುವರ್ಷಗಳ ಕಾಲ ಉತ್ತರ ಕನ್ನಡ ಜಿಲ್ಲೆಗೆ ಕಾಲಿಡದಂತೆ ಹದ್ದುಪಾರು (ಗಡಿ-ಪಾರು) ಆಜ್ಞೆ ಹೊರಡಿಸಿತು.

ಗಡಿಪಾರು ಆಜ್ಞೆಯಿಂದ ರೈತ ಚಳವಳಿ ನಿಲ್ಲಬಹುದೆಂದು ಕೊಂಡವರಿಗೆ ಘೋರ ನಿರಾಶೆ ಕಾದಿತ್ತು. ಅವರ ಗೈರು-ಹಾಜರಿಯಲ್ಲಿ ಶ್ರೀಮಾನ್ ಶೇಷಗಿರಿ ವೆಂಕಟರಾವ್ ಪಿಕಳೆ ಯವರು (ಗಿರಿಮಾಸ್ತರರು) ರೈತ ಚಳವಳಿಯನ್ನು ಇಮ್ಮಡಿ ಉತ್ಸಾಹದಿಂದ ಮುಂದುವರಿಸಿದರು.

"ಊಳುವವನೇ ಹೊಲದೊಡೆಯ ದುಡಿಯುವ ರೈತ ನಿಗೆ ಹೊಟ್ಟೆತುಂಬ ಉಣ್ಣುವ ಹಕ್ಕಿದೆ. ನಾವು ಕೇಳುವುದು ಹೊಟ್ಟೆತುಂಬ ಅನ್ನ, ತಲೆಯ ಮೇಲೆ ಒಂದು ನೆರಳು, ಮೈ ಮುಚ್ಚುವಷ್ಟು ಬಟ್ಟೆ, ಇಷ್ಟಕ್ಕಾಗಿಯೇ ನಮ್ಮ ಹೋರಾಟ. ರೈತಬಾಂಧವರೆ, ಭೂಮಿ ನಿಮ್ಮದು, ಅದು ಒಡೆಯನದೂ ಅಲ್ಲ; ಸರಕಾರದ್ದೂ ಅಲ್ಲ. ಈ ಸರಕಾರ ತಂದ ಹೊಲಸಾಗು-ವಳಿ ಕಾನೂನು ಹೊಲಸು ಸಾಗುವಳಿ ಕಾನೂನಾಗಿದೆ. ಇದರ ವಿರುದ್ಧ ನಾವು ಹೋರಾಡಲೇಬೇಕು. ಈ ಕುಂಭಕರ್ಣ ಜಾತಿಯ ಸರಕಾರ ಕಣ್ಣುಬಿಡಲೇಬೇಕು."

ದೀನ ದಲಿತರ ಕಪ್ತಾನ ದಿನಕರ ದೇಸಾಯಿ ರೈತ ಸಭೆ ಯಲ್ಲಿ ಗುಡುಗುವ ರೀತಿಯಿದು. ಇಂಥ ಸಭೆಗಳನ್ನು ಸಂಘಟಿ

ಸುವುದಕ್ಕಾಗಿ ರೈತರ ಮನೆಯಂಗಳದಲ್ಲಿ ಅವರು ಕಳೆದ ರಾತ್ರಿಗಳೆಷ್ಟೊ! ಉಪವಾಸ-ತಪವಾಸ ಅನುಭವಿಸಿದ್ದೆಷ್ಟೊ! ಈ ಎಲ್ಲ ಹೋರಾಟದ ಫಲವಾಗಿ ಎಕರೆಗೆ ಎಂಟು ಕಂಡಗ ಅಕ್ಕಿ ಎನ್ನುವುದು ಹೋಗಿ ೧/೬ ಗೇಣಿಪದ್ಧತಿ ಜಾರಿಗೆ ಬಂತು. ಆದರೆ ದೇಸಾಯಿಗೆ ಅಷ್ಟರಿಂದಲೇ ತೃಪ್ತಿಯಿಲ್ಲ. ರೈತನ ಹೆಸರಿಗೇ ಭೂಮಿಯನ್ನು ಖಾತೆ ಹಾಕಿ ಕೊಡಬೇಕೆಂಬುದೇ ಅವರ ಹಟದ ಆಗ್ರಹ.

ಮುಂದೆ ಕರ್ನಾಟಕದಲ್ಲಿ ದಿವಂಗತ ದೇವರಾಜ ಅರಸರ ಆಡಳಿತ ಬಂದಾಗ ಹೊಸ ಭೂಸುಧಾರಣಾ ಕಾನೂನು ಬಂದು, ದೇಸಾಯಿಯು ಅಂದಿನ ಕನಸೇನೊ ನನಸಾಯಿತು. ಆದರೆ ದೇಸಾಯಿ ಹೇಳಿದ ಮಾತು ನಮ್ಮ ಜನತೆಗೆ ನಲವತ್ತು ವರ್ಷಗಳ ನಂತರ ಅರ್ಥವಾಯಿತಲ್ಲ ಎಂಬುದೇ ಒಂದು ದೊಡ್ಡ ವಿಪರ್ಯಾಸ.

## ៩. ಬರಗಾಲ ಪರಿಹಾರ ಸಮಿತಿ ಕಾರ್ಯದರ್ಶಿಯಾಗಿ

ಕ್ಷಾಮಕ್ಕೆ ಹೆಸರಾದ ಜಿಲ್ಲೆ ವಿಜಾಪುರ. ಪದೇ ಪದೇ ಆ ನೆಲ ಬರದಿಂದ ಬಳಲುವುದುಂಟು. ೧೯೪೨ರ ಅವಧಿಯಲ್ಲಿ ಬಿದ್ದ ಕ್ಷಾಮ ಆ ಜಿಲ್ಲೆಯ ಇತಿಹಾಸದಲ್ಲೇ ಭೀಕರ ಸ್ವರೂಪದ್ದು.

ಬರ ಬಿದ್ದ ನೆಲದಲ್ಲಿ ಹೋಗಿ ನಿಧಿ ಸಂಗ್ರಹಿಸಿ ಜನರಿಗೂ ಜಾನುವಾರುಗಳಿಗೂ ತೊಂದರೆಯಾಗದಂತೆ ನೋಡುವ

ಹೊಣೆಗಾರಿಕೆ ದಿನಕರ ದೇಸಾಯಿ ಪಾಲಿಗೆ ಬಂದಿತು. ಆಗ ಭಾರತ ಸೇವಕ ಸಮಾಜದ ಉಪಾಧ್ಯಕ್ಷರಾಗಿದ್ದ ಶ್ರೀ ಎ. ವಿ. ಠಕ್ಕರ್ ಅವರ ಹಿರಿತನದಲ್ಲಿ ಒಂದು ಬರ ಪರಿಹಾರ ಸಮಿತಿ ರಚಿಸ-ಲಾಗಿತ್ತು. ಶ್ರೀ ಎಚ್. ಎಸ್. ಕೌಜಲಗಿ ಹಾಗೂ ಶ್ರೀ ದಿನಕರ ದೇಸಾಯಿ ಆ ಸಮಿತಿಯ ಗೌರವ ಕಾರ್ಯದರ್ಶಿಗಳು. ಡಾ॥ ಆರ್. ಜಿ. ಕಾಕಡೆ ಗೌರವ ಸಹಕಾರ್ಯದರ್ಶಿಗಳಾಗಿದ್ದರು. ಸಮಿತಿಯಲ್ಲಿ ಇಬ್ಬರು ಮಹಿಳೆಯರೂ ಸೇರಿ ಒಟ್ಟೂ ೧೫ ಜನ ಸದಸ್ಯರಿದ್ದರು. ದಿನಕರ ದೇಸಾಯಿ ಕನ್ನಡ ಬಲ್ಲವರಾದುದ-ರಿಂದ ಭಾರತ ಸೇವಕ ಸಮಾಜವು ಅವರ ಮೇಲೇ ಈ ಸೇವಾ ಕಾರ್ಯದ ಗುರುತರ ಜವಾಬ್ದಾರಿ ಹೊರಿಸಿತ್ತು.

ದಿನಕರ ದೇಸಾಯಿ ಬಿಜಾಪುರಕ್ಕೆ ಬಂದವರೇ ಜಿಲ್ಲೆ-ಯುದ್ದಕ್ಕೂ ತಿರುಗಾಡಿ, ನಿಜಸ್ಥಿತಿಯ ಒಂದು ವರದಿಯನ್ನು ಸಿದ್ಧಪಡಿಸಿ ಒಪ್ಪಿಸಿದರು.

ನಿಧಿ ಸಂಗ್ರಹಕ್ಕಾಗಿ ಮುಂಬಯಿ ಹಾಗೂ ವಿಜಾಪುರ ಗಳಲ್ಲಿ ಪ್ರತ್ಯೇಕ ಕಚೇರಿಗಳನ್ನು ತೆರೆಯಲಾಯಿತು. ದಾನಿಗಳಿಂದ ಹಣವನ್ನಲ್ಲದೆ ಬಟ್ಟೆಗಳನ್ನೂ ಸಂಗ್ರಹಿಸಲಾಯಿತು. ಒಟ್ಟಿಗೆ ೧೦, ೨೫, ೧೭೯ ರೂಪಾಯಿಗಳನ್ನು ಸಂಗ್ರಹಿಸಲಾಗಿತ್ತು. ಮುಂಬಯಿ ಕಚೇರಿಯಲ್ಲಿ ೬, ೭೦, ೪೭೧ ರೂಪಾಯಿಗಳೂ, ಬಿಜಾಪುರದಲ್ಲಿ ೩, ೫೪, ೬೫೭ ರೂಪಾಯಿಗಳೂ ಕೂಡಿದ್ದವು. ಇದರ ಹೊರತಾಗಿ ೧, ೦೬, ೯೩೦ ಬಟ್ಟೆಗಳನ್ನು ಸಂಗ್ರಹಿಸ-ಲಾಗಿತ್ತು. ಆ ಬಟ್ಟೆಯನ್ನು ಮಕ್ಕಳಿಂದ ಮುದುಕರವರೆಗೆ ಒಟ್ಟೂ ೮೪,೦೪೦ ಜನರಿಗೆ ಹಂಚಲಾಯಿತು.

ಈ ಎಲ್ಲ ಕೆಲಸಗಳ ಕೇಂದ್ರ ವ್ಯಕ್ತಿಯಾಗಿ ಶ್ರೀ ಕೌಜಲಗಿ ಹಾಗೂ ದಿನಕರ ದೇಸಾಯಿ ದುಡಿದರೆಂಬುದನ್ನು ಬೇರೆ ಹೇಳ ಬೇಕಾಗಿಲ್ಲ, ಈಗಲೂ ಆ ಭಾಗದ ಹಿರಿಯ ತಲೆಮಾರಿನ ಜನ ದಿನಕರ ದೇಸಾಯರು ಅಂದು ಸಲ್ಲಿಸಿದ ಅನುಪಮ ಸೇವೆ-ಯನ್ನೂ, ಪಟ್ಟ ಶ್ರಮವನ್ನೂ ಕೊಂಡಾಡುತ್ತಿರುವುದುಂಟು.

## ೧೦. ಆದರ್ಶ ಪತ್ರಿಕೋದ್ಯಮ

೧೯೫೫ರಲ್ಲಿ ದಿನಕರ ದೇಸಾಯರು ಪ್ರಾರಂಭಿಸಿದ **'ಜನ ಸೇವಕ'** ವಾರಪತ್ರಿಕೆಯನ್ನು ಪ್ರಜ್ಞಾವಂತ ಓದುಗ ಎಂದೂ ಮರೆಯಲಾರ. ಅವರ ಕೆನರಾ ವೆಲ್‌ಫೇರ್ ಟ್ರಸ್ಟಿನ ಆಜೀವ ಕಾರ್ಯಕರ್ತ ಅಮ್ಮೆಂಬಳ ಆನಂದರ ಸಂಪಾದಕತ್ವದಲ್ಲಿ ಒಂದು ವಾರವೂ ತೆರಪಿಲ್ಲದೆ, ಹದಿನೇಳು ವರ್ಷಗಳ ಕಾಲ ಸಣ್ಣ ಪತ್ರಿಕೆ ಗಳಿಗೇ ಒಂದು ಮಾದರಿಯಾಗಿ, ಮಾರ್ಗದರ್ಶಿಯಾಗಿ ನಡೆದ ಸಾಪ್ತಾಹಿಕ ಅದು.ಆ ಪತ್ರಿಕೆಯ ಸಂಪಾದಕೀಯ ಹಾಗೂ ಮುಖಪುಟದ ಲೇಖನಗಳನ್ನು ದೇಸಾಯರೇ ಬರೆಯುತ್ತಿದ್ದರು. ದೇಸಾಯಿ ಮುಂಬಯಿಯಲ್ಲಿದ್ದರೂ, ಅಂಕೋಲೆಯಿಂದ ಪ್ರತಿ ಬುಧವಾರ ಹೊರಡುತ್ತಿದ್ದ ಆ ಪತ್ರಿಕೆಗೆ ನಿರ್ದಿಷ್ಟ ವೇಳೆ ಯೊಳಗೆ **'ಜನಸೇವಕ'** ಎಂಬ ಹೆಸರಿನಲ್ಲಿ ಲೇಖನಗಳನ್ನು ಬರೆದು ತಲುಪಿಸುತ್ತಿದ್ದರು. ಆ ಲೇಖನಗಳು ಎಷ್ಟು ಬೋಧ ಪ್ರದವಾಗಿರುತ್ತಿದ್ದವೆಂದರೆ, ಕನ್ನಡದ ಹಿರಿಯ, ಪ್ರಸಿದ್ಧಿ-ಪ್ರಸಾರವುಳ್ಳ ದೈನಿಕಗಳೂ ಇತರ ಸಾಪ್ತಾಹಿಕಗಳೂ ಬಿಡದೆ ಆ ಲೇಖನಗಳನ್ನು ಪುನರ್ಮುದ್ರಿಸುತ್ತಿದ್ದವು.

ಉತ್ತರಕನ್ನಡ ಜಿಲ್ಲೆಯ ಜನಜಾಗೃತಿಯೂ ಆ ಪತ್ರಿಕೆಯ ಮುಖ್ಯ ಉದ್ದೇಶಗಳಲ್ಲಿ ಒಂದಾಗಿತ್ತು. ಒಂದು ಪತ್ರಿಕೆ ಎಷ್ಟೊಂದು ಅದ್ಭುತವಾದ ರೀತಿಯಲ್ಲಿ ಸಾರ್ವಜನಿಕ ಅಭಿ-ಪ್ರಾಯವನ್ನು ರೂಪಿಸಿ, ಆ ಮೂಲಕ ನಾಡಿನ-ರಾಷ್ಟ್ರದ ಗಮನ ಸೆಳೆಯಬಲ್ಲದು ಎಂಬುದಕ್ಕೆ 'ಜನಸೇವಕ' ಮಾದರಿ-ಯಾಗಿತ್ತು.

ದೇಸಾಯಿ ಲೇಖನಗಳಲ್ಲಿ ಚಿಂತಕನ ವಿಚಾರವಂತಿಕೆ, ಬಂಡಾಯಗಾರನ ತಾಕೀತುಗಳೆರಡೂ ತುಂಬಿಕೊಂಡಿರು-ತ್ತಿದ್ದವು. ನಿರ್ಭೀತಿ ಹಾಗೂ ನಿಷ್ಪಕ್ಷಪಾತತನಕ್ಕೆ 'ಜನಸೇವಕ' ಮಾದರಿಯಾಗಿತ್ತು. ವ್ಯಕ್ತಿ ಎಷ್ಟೇ ದೊಡ್ಡವನಿರಲಿ ತಾವು ನಂಬಿದ ತತ್ವದ ಹೊರಗೆ ರಾಜಿಮಾಡಿಕೊಂಡವರಲ್ಲ, ಅವರ ವಾರದ ಲೇಖನಗಳಿಗಾಗಿ ಓದುಗ ಕಾತರದಿಂದ ಕಾದಿರುತ್ತಿದ್ದ. ಗದ್ಯಲೇಖನಗಳೊಂದಿಗೆ ಪ್ರತಿವಾರವೂ 'ಭತ್ತದ ತೆನೆ' ಎಂಬ ಹೆಸರಿನಲ್ಲಿ ಎರಡೆರಡು ಚುಟಕಗಳನ್ನು ಬಡಿಸುತ್ತಿದ್ದರು. ವರ್ತಮಾನ ಕಾಲದ ರಾಡಿಗಳನ್ನು ಗುರುತಿಸಿ ವ್ಯಂಗ್ಯವಾಡುವ, ಚುಚ್ಚುವ ಆ ಚೌಪದಿಗಳನ್ನೂ ಇತರ ಪತ್ರಿಕೆಗಳು ತಮ್ಮ ಪುಟಗಳಿಗಾಗಿ ಎತ್ತಿಕೊಳ್ಳುತ್ತಿದ್ದವು.

ಆರ್ಥಿಕ ನಷ್ಟದಿಂದಾಗಿ(?) ೧೯೭೨ರ ಅಗಸ್ಟ್ ೨ ರಂದು 'ಜನಸೇವಕ' ನಿಂತಾಗ ನಾಡಿನ ಅನೇಕ ಪತ್ರಿಕೆಗಳು ಸಂಪಾದ-ಕೀಯ ಬರೆದು ಕಣ್ಣೀರು ಮಿಡಿದವು. ಬುದ್ಧಿಜೀವಿಗಳು ತಮ್ಮ 'ಗೈಡ್' ಒಬ್ಬನನ್ನು ಕಳೆದುಕೊಂಡ ವ್ಯಥೆ ಅನುಭವಿಸಿದರು.

ಸಾಮಾನ್ಯ ಓದುಗರು ಪ್ರತಿವಾರವೂ ಸವಿಯುತ್ತಿದ್ದ 'ವಾರದ ಉಪ್ಪಿನಕಾಯಿ'ಯಿಲ್ಲದೆ, ಮನದಣಿಯೆ ಅನುಭವಿಸುತ್ತಿದ್ದ 'ಭತ್ತದತೆನೆ' ಕಾಣದೆ ಹಳ ಹಳಿಸಿದರು. 'ಪ್ರಜಾವಾಣಿ' ತನ್ನ ಛೂಬಾಣ'ದ ಮೂಲಕ 'ಜನಸೇವಕ'ನನ್ನು ಕಳಕೊಂಡವರ ಲೇವಡಿ ಮಾಡಿತು. ಅದೇ ಪತ್ರಿಕೆಯು ೧೯೭೨, ಅಗಸ್ಟ್ ೩ರ ಸಂಚಿಕೆಯು 'ಸುದ್ದಿಯ ತೆರೆಮರೆ' ಎಂಬ ಕಾಲಮ್ಮಿನಲ್ಲಿ ಹೀಗೆ ಬರೆಯಿತು;

> "'ಜನಸೇವಕ' ಮರೆಯಾಗುತ್ತಿರುವುದಕ್ಕೆ ಕರ್ನಾಟಕದ ಎಲ್ಲೆಡೆ ದುಃಖ ವ್ಯಕ್ತವಾಗುತ್ತಿದ್ದರೆ ಅದರ ಪ್ರಸಾರ ಕ್ಕಿಂತ ಪ್ರಭಾವ ಕಾರಣ. ದಿನಕರರಂಥವರ ದಿಟ್ಟ, ನಿಷ್ಠುರ ಮಾರ್ಗದರ್ಶನವಿತ್ತು, ಸತ್ಯ ಸಾರುವ ಕೆಚ್ಚಿತ್ತು, ಸುಂದರ ಭಾಷೆಯ ವೈಭವವಿತ್ತು......"

ಹುಬ್ಬಳ್ಳಿಯ 'ಪ್ರಪಂಚ' ಪತ್ರಿಕೆಯು,

> "ಪತ್ರಿಕೆಗಳು ಯಾವ ರೀತಿ ಜನರ ಸೇವೆ ಮಾಡಬಹುದು ಎಂಬುದಕ್ಕೆ 'ಜನಸೇವಕ' ನಿಜಕ್ಕೂ ಒಂದು ಉತ್ತಮ ಮಾದರಿ ಅನಿಸಿತ್ತು. ಇದ್ದುದನ್ನು ಇದ್ದಂತೆ ಕೆಚ್ಚಿನ ಯಿಂದ ಹೇಳುವ ಗುಣ ಅದರಲ್ಲಿ ತುಂಬಿಕೊಂಡಿದ್ದಿತು. ಇಂತಹ 'ಜನಸೇವಕ' ಈ ಯುಗದಲ್ಲಿಯೋ, ಈ ಜಗತ್ತಿ ನಲ್ಲಿಯೋ ಇನ್ನೊಬ್ಬ ಸಿಗುವುದಿಲ್ಲ!" ಎಂದು ಬರೆಯಿತು.

ಮಣಿಪಾಲದ 'ಉದಯವಾಣಿ',

> "ವೈಚಾರಿಕ ಲೇಖನಗಳಿಗೆ ಹೆಸರಾದ, ಯಾವುದೇ ಪಕ್ಷ- ಗುಂಪುಗಳಿಗೆ ಗಂಟುಬೀಳದೆ, ಆಳುವ ಮಹಾಸ್ವಾಮಿ

ಗಳಿಗೆ ಭೋಪರಾಕ್ ಹೇಳದೆ ನಿರ್ಭೀತ ಹಾಗೂ ನಿರ್ದಾ-
ಕ್ಷಿಣ್ಯ ಲೇಖನಗಳಿಗೆ ಹೆಸರಾದ, ಚಿಕ್ಕದಾದರೂ ಪ್ರಭಾವ
ಶಾಲಿಯಾದ ವಾರಪತ್ರಿಕೆ ಅಂಕೋಲಾದ 'ಜನಸೇವಕ'ದ
ಕೊನೆ, ನಮ್ಮ ಜನರ ಮಸಾಲೆ ಅಭಿರುಚಿಗೆ ಬಲಿಯಾದ
ಇನ್ನೊಂದು ಪತ್ರಿಕೆ." ಎಂದು ಪ್ರತಿಕ್ರಿಯಿಸಿತು.

ಬೆಂಗಳೂರಿನ 'ಜನಪ್ರಗತಿ'ಯ ಕಂಬನಿ :

"ಜನಸೇವಕ' ಇಡೀ ನಾಡಿಗೇ ಮಾದರಿಯ ಪತ್ರಿಕೆ
ಯೆಂದು ಅನಿಸಿದ್ದರಿಂದ ಅದರ ಬಗ್ಗೆ ಅತ್ಯಂತ ಆತ್ಮೀಯ
ಸೋದರಭಾವವಿಟ್ಟುಕೊಂಡಿದ್ದ ನಮಗೆ ಆದರ ಸಾವಿ-
ನಲ್ಲಿ ಆಗಿರುವ ದುಃಖ ಅಷ್ಟಿಷ್ಟಲ್ಲ......"

'ಜನಸೇವಕ'ಕ್ಕೆ ಮೊದಲು ದಿನಕರ ದೇಸಾಯಿ
'ಜಯಂತಿ'. 'ಕರ್ನಾಟಕ ಧುರೀಣ', 'ಜಾಗೃತ ಕರ್ನಾಟಕ',
ಮುಂತಾದ ಪತ್ರಿಕೆಗಳಿಗೆ ನಿಯಮಿತವಾಗಿ ಬರೆದದ್ದೂ ಉಂಟು.
ಇವರ ಪತ್ರಿಕಾವ್ಯವಸಾಯದಲ್ಲಿಯ ಅನುಪಮ ಸೇವೆಯನ್ನು
ಕೊಂಡಾಡಿ ಬೆಂಗಳೂರಿನ ಬಿ. ಎನ್. ಗುಪ್ತಾರ ಜನ್ಮಭೂಮಿ
ಟ್ರಸ್ಟು ೧೯೭೬ ರಲ್ಲಿ ಐದುಸಾವಿರ ರೂಪಾಯಿ ಹಮ್ಮಿಣಿ
ಯೊಂದಿಗೆ 'ಶ್ರೇಷ್ಠ ಪತ್ರಕರ್ತ'ನೆಂಬ ಬಿರುದಿತ್ತು ಅಭಿ
ನಂದಿಸಿತು.

## ೧೧. ಶಿಕ್ಷಣ ತಜ್ಞ ಹಾಗೂ ಪ್ರಸಾರಕ

ಅಕ್ಷರ ಕ್ರಾಂತಿಯ ಹೊರತು ಯಾವುದೇ ಪ್ರದೇಶದ
ಪ್ರಗತಿ ಸಾಧ್ಯವಿಲ್ಲ ಎಂದು ನಂಬಿದವರು ದಿನಕರ ದೇಸಾಯಿ.
ಇದನ್ನು ಅವರು ತಮ್ಮ ಸಂಘಟನೆಯ ಕಾಲದಲ್ಲಿ ಹೆಚ್ಚು

ಸ್ಪಷ್ಟವಾಗಿ ಕಂಡುಕೊಂಡರು. ಪ್ರಾಥಮಿಕ ಹಂತದಿಂದಲೇ ನಮ್ಮ ಶಿಕ್ಷಣದ ನೆಲಗಟ್ಟು ಭದ್ರವಾಗಿರಬೇಕೆಂಬುದು ಅವರ ನಂಬಿಕೆ. 'Primary Education in India' ಎಂಬ ಆಂಗ್ಲ ಭಾಷೆಯಲ್ಲಿ ಅವರು ಬರೆದ ಕೃತಿಯೇ ಇದಕ್ಕೆ ಸಾಕ್ಷಿ.

ಶೋಷಣೆಯನ್ನು ದೇಸಾಯಿ ಎಂದೂ ಸಹಿಸರು. ಆದರೆ ಜನರು ಜಾಗೃತರಾಗದೆ ಶೋಷಣೆಯನ್ನು ತಡೆಯುವುದು ಸಾಧ್ಯವಿಲ್ಲ ಎಂಬುದು ದೇಸಾಯಿಗೆ ಗೊತ್ತು. ಅಜ್ಞಾನದಿಂದ ಮೂಢನಂಬಿಕೆಗಳಂಥ ಅನಿಷ್ಟ ಪರಂಪರೆಗಳೂ ಹಚ್ಚುತ್ತಿವೆ. ಆ ಮೂಲಕ ಶೋಷಕರು ಇನ್ನಷ್ಟು ವ್ಯವಸ್ಥಿತವಾಗಿ ತಮ್ಮ ಕಾರ್ಯ ಸಾಧಿಸಿಕೊಳ್ಳಬಲ್ಲರು. ಹಾಗಾದರೆ ಇದಕ್ಕೆ ಇರುವ ಮಾರ್ಗೋಪಾಯ ಯಾವುದು? ಪುನಃ ದೇಸಾಯಿಗೆ ಅರ್ಜೆಂಟೆನಿಸಿದ್ದು ಶಿಕ್ಷಣದ ಪ್ರಸಾರ. ಅದರ ಫಲವೇ ಅವರು ೧೯೫೩ ರಲ್ಲಿ ಕಟ್ಟಿ ಬೆಳೆಸಿದ ಕೆನರಾ ವೆಲ್‌ಫೇರ್ ಟ್ರಸ್ಟು.

ಟ್ರಸ್ಟಿನ ಪ್ರಥಮ ಹೈಸ್ಕೂಲು ತಲೆಯೆತ್ತಿದ ಹಿನ್ನೆಲೆ ಉಲ್ಲೇಖನೀಯ. ಆಗ, ಅಂಕೋಲೆಯ ಶಾಂತಾದುರ್ಗಾ ದೇವಸ್ಥಾನದ ಪಕ್ಕದ ಕಟ್ಟಡದಲ್ಲಿ ಪೀಪಲ್ಸ್ ಹೈಸ್ಕೂಲು ನಡೆಯುತ್ತಿತ್ತು. ಶ್ರೀ ಶೇಷಗಿರಿ ಪಿಕಳೆ (ಗಿರಿ ಪಿಕಳೆ) ಅಲ್ಲಿ ಶಿಕ್ಷಕರು. ದಿನಕರರ ರೈತ ಸಂಘಟನೆಯಲ್ಲಿ ಪಿಕಳೆಯವರ ಪಾತ್ರವೇ ಹಿರಿದು. ಹೈಸ್ಕೂಲಿನ ಆಡಳಿತ ಶ್ರೀಮಂತ ಭೂಮಾಲಿಕರ ಕೈಯಲ್ಲಿ. ಭೂಮಾಲಿಕರಿಗೆ ಸಿಂಹಸ್ವಪ್ನವಾಗಿದ್ದ ಪಿಕಳೆಯವರ ಮೇಲೆ ಸೇಡು ತೀರಿಸಿಕೊಳ್ಳುವ ಉದ್ದೇಶದಿಂದ ಅವರನ್ನು ಸೇವೆಯಿಂದ ವಜಾ ಮಾಡಿದರು. ಈ ವಿಚಾರ ಆಗ

ಮುಂಬಯಿಯಲ್ಲಿದ್ದ ದೇಸಾಯರಿಗೆ ತಿಳಿಸಲಾಯಿತು. ರೈತ ಕೂಟಗಳಲ್ಲೂ ಚರ್ಚೆಗೆ ಬಂತು. ರೈತರು ತಮ್ಮದೇ ಆದ ಒಂದು ಹೈಸ್ಕೂಲನ್ನು ಪ್ರಾರಂಭಿಸಬೇಕೆಂದು ಠರಾವು ಕೈಕೊಂಡರು. ಎಕರೆಗೆ ಕನಿಷ್ಠ ಐದು ರೂಪಾಯಿಯಂತೆ ರೈತರೇ ಮುಂದಾಗಿ ದೇಣಿಗೆಯನ್ನೂ ಸಂಗ್ರಹಮಾಡಿದರು. ಒಟ್ಟಿಗೆ ೬,೬೫೦ ರೂಪಾಯಿ ಕೂಡಿದವು. ಬೊಬ್ರುವಾಡಾ ಗ್ರಾಮದ ಸೊಡ್ಲೆಯಲ್ಲಿ (ರುದ್ರಭೂಮಿ) ಕೇವಲ ಮೂವತ್ತು ದಿನದೊಳಗಾಗಿ ಹೊಸ ಕಟ್ಟಡ ತಲೆಯೆತ್ತಿತು. ರೈತರು ಅಂಗ ಮೆಹನತ್ತಿನಿಂದ ಕಟ್ಟಿದ ಆ ಕಟ್ಟಡಕ್ಕೆ 'ರೈತ ಭವನ' ಎಂದೇ ಹೆಸರಿಟ್ಟರು ದಿನಕರ ದೇಸಾಯಿ. ಪಿಕಳೆ ಅದರ ಪ್ರಥಮ ಪ್ರಿನ್ಸಿಪಾಲರಾದರು. ಪಿ ಪಲ್ಸ್ ಮಲ್ಟಿಪರ್ಪಸ್ ಹೈಸ್ಕೂಲ್–ಆ ಮೂಲಕ ಕೆನರಾ ವೆಲ್‌ಫೇರ್ ಟ್ರಸ್ಟಿನ ಬೀಜಾಂಕುರ ವಾದದ್ದು ಹೀಗೆ.

ಹದಿನೈದು ಹೈಸ್ಕೂಲುಗಳು, ಎರಡು ಡಿಗ್ರಿ ಕಾಲೇಜು ಗಳು, ಮೂರು ಜ್ಯೂನಿಯರ್ ಕಾಲೇಜುಗಳು, ಎರಡು ಹೊಲಿಗೆ ಶಾಲೆಗಳು, ಒಂದು ಆಂಗ್ಲಮಾಧ್ಯಮ ಪ್ರಾಥಮಿಕ ಶಾಲೆ, ಎರಡು ಬಾಲವಾಡಿ (ಕೆ. ಜಿ. ಕ್ಲಾಸ್) ಕೇಂದ್ರಗಳು, ಎರಡು ಆಸ್ಪತ್ರೆಗಳು, ಒಂದು ಬಡಹಾಲಕ್ಕಿ ಮಕ್ಕಳಿಗಾಗಿ ಕಟ್ಟಿಸಿದ ವಸತಿಗೃಹ, ಒಂದು ಪುಸ್ತಕ ಪ್ರಕಾಶನ ಸಂಸ್ಥೆ (ಜನತಾ ಪ್ರಕಾಶನ, ಅಂಕೋಲಾ) ಹೀಗೆ ಒಟ್ಟೂ ೨೯ ಸಂಸ್ಥೆ ಗಳು ಕೆನರಾ ವೆಲ್‌ಫೇರ್ ಟ್ರಸ್ಟಿನ ಆಶ್ರಯದಲ್ಲಿ ಕೆಲಸ ಮಾಡು ತ್ತಿವೆ. ಕಾರವಾರದಿಂದ ಭಟಕಳವರೆಗೆ, ದಾಂಡೇಲಿಯಿಂದ

ಮುಂಡಗೋಡವರೆಗೆ ಜಾಳಿಗೆಯೋಪಾದಿಯಲ್ಲಿ ಈ ಸೇವಾ ಸಂಸ್ಥೆಗಳು ದಿನಕರರ ಕರ್ತೃತ್ವಶಕ್ತಿಯ ಸ್ಮಾರಕಗಳಾಗಿ ನಿಂತಿವೆ. ದಿನಕರ ದೇಸಾಯರ ರೈತ ಚಳುವಳಿಯ ಕಾವು ಹೆಚ್ಚಾಗಿದ್ದ ಹಳ್ಳಿಗಳೆಲ್ಲ ಒಂದೊಂದು ಹೈಸ್ಕೂಲುಗಳನ್ನು ಪಡೆದಿವೆಯೆಂಬುದು ಇನ್ನೊಂದು ವಿಶೇಷ ಅಂಶ. ಮಣ್ಣಿನ ಮಕ್ಕಳೇ ಹನಿ ಹನಿ ಕೂಡಿಸಿ ಆ ಸಂಸ್ಥೆಗಳ ಆರಂಭದಲ್ಲಿ ತಮ್ಮ ಪಾಲಿನ ಕರ್ತವ್ಯ ನಿರ್ವಹಿಸಿದ್ದಾರೆ.

'Educational work in a forest district' ಎಂಬ ಹೆಸರಿನ ಹೊತ್ತಿಗೆಯೊಂದನ್ನು ಪ್ರತಿವರ್ಷವೂ ಹೊರಡಿಸಿ, ಈ ಎಲ್ಲ ಶಿಕ್ಷಣ ಸಂಸ್ಥೆಗಳ ಸ್ಥಿತಿ-ಗತಿಗಳ ಜಾತಕವನ್ನು ಅದರಲ್ಲಿಟ್ಟು, ಅವಜ್ಞೆಗೆ ಒಳಗಾದ ಈ ಬಡಜಿಲ್ಲೆಯ ಶಿಕ್ಷಣ ಪ್ರಗತಿಗಾಗಿ ದಾನಮಾಡಬೇಕೆಂದು ದಿನಕರ ದೇಸಾಯಿ ಮುಂಬಯಿ ಮಹಾನಗರದಲ್ಲೂ, ದೇಶ-ವಿದೇಶಗಳಲ್ಲಿರುವ ಇತರ ಸೇವಾ ಸಂಸ್ಥೆಗಳ ಎದುರೂ ತಮ್ಮ ಬೇಡಿಕೆಯನ್ನು ಇಟ್ಟರು. ಅದರ ಫಲವಾಗಿ, ಸುಮಾರು ಎಪ್ಪತ್ತೈದು ಲಕ್ಷಕ್ಕಿಂತ ಹೆಚ್ಚು ಹಣ ದೇಣಿಗೆ ರೂಪದಲ್ಲಿ ಕೆನರಾ ವೆಲ್‌ಫೇರ್ ಟ್ರಸ್ಟಿಗೆ ಹರಿದು ಬಂತು. ಆ ಮೂಲಕ ಒಂದೂವರೆ ಕೋಟಿಗೂ ಮಿಕ್ಕಿದ ಚಿರಾಸ್ತಿಯನ್ನು ಇಂದು ಟ್ರಸ್ಟು ಹೊಂದಿರುವಂತಾಗಿದೆ.

ದಿನಕರ ದೇಸಾಯಿ ಒಬ್ಬ ಶ್ರೇಷ್ಠ ಶಿಕ್ಷಣತಜ್ಞ. ಶಾಲೆ-ಕಾಲೇಜುಗಳ ಕಟ್ಟಡ ಹೇಗಿರಬೇಕು, ಕೋಣೆಗಳ ಉದ್ದ-ಅಗಲ ಎಷ್ಟಿರಬೇಕು, ಪ್ರತಿ ಕೋಣೆಯಲ್ಲಿ ಎಷ್ಟು ವಿದ್ಯಾರ್ಥಿಗಳಿರು-

ವುದು ಯೋಗ್ಯ, ಬೋಧಕನ ಅರ್ಹತೆಗಳಾವವು, ಅವನನ್ನು ಹೇಗೆ ನಡೆಸಿಕೊಳ್ಳಬೇಕು. ಬಡ-ಬುದ್ಧಿಮಾಂದ್ಯ ವಿದ್ಯಾರ್ಥಿಗಳ ಸಮಸ್ಯೆಗಳೇನು ? ಅವರನ್ನು ನಡೆಸಿಕೊಳ್ಳಬೇಕಾದ ರೀತಿ ಯಾವುದು ?... ಸಂಸ್ಥೆಯ ಮುಖ್ಯಸ್ಥನ ಹೊಣೆಗಾರಿಕೆಗಳಾ-ವವು? ಸಮಸ್ಯೆಗಳೆಷ್ಟು, ಶಾಲೋದ್ಯಾನಗಳಲ್ಲಿ ಯಾವ ಹೂವಿನ ಗಿಡ ಎಲ್ಲಿರಬೇಕು, ಯಾವ ಗಿಡಕ್ಕೆ ಎಂಥ ಮಣ್ಣುಬೇಕು, ಎಷ್ಟು ಗೊಬ್ಬರ-ಎಷ್ಟು ನೀರು ಬೇಕು, ಭಾರತೀಯ ಸಮಾಜ ವ್ಯವಸ್ಥೆ ಯಲ್ಲಿ ಎಳೆಯರಿಗೆ ನೀಡಬೇಕಾದ ಶಿಕ್ಷಣದ ಸ್ವರೂಪ ಹೇಗಿರ-ಬೇಕು, ಆದರಲ್ಲಿ ಸರಕಾರದ ಹೊಣೆ ಎಷ್ಟು-ಹೀಗೆ, ಶಿಕ್ಷಣದ ಎಲ್ಲ ಮಜಲುಗಳನ್ನೂ ದೇಸಾಯಿ ಮುಟ್ಟಿ ನೋಡಿದವರು. ಮುಂಬಯಿಯಲ್ಲಿ ತಾವಿದ್ದೇ, ಉತ್ತರ ಕನ್ನಡದಲ್ಲಿ ಕೆಲಸ ಮಾಡುವ ಎಲ್ಲ ಶಿಕ್ಷಣ ಸಂಸ್ಥೆಗಳ ಬಗ್ಗೆ ಇದೇ ಮಾದರಿಯಲ್ಲಿ ಕಾಳಜಿ ತೆಗೆದುಕೊಂಡವರು. ಈ ಕಾರಣದಿಂದಾಗಿಯೇ ದೇಸಾಯರು ಕಟ್ಟಿದ ಸಂಸ್ಥೆಗಳ ಒಳ ಹಾಗೂ ಹೊರ ನೋಟ-ಗಳಲ್ಲೆಲ್ಲ ಒಂದೇ ರೀತಿಯ ಒಪ್ಪು-ಓರಣ.

## ೧೨. ಶುದ್ಧ ರಾಜಕಾರಣಿ

ದಿನಕರ ದೇಸಾಯಿ ಒಬ್ಬ ಶುದ್ಧ ರಾಜಕಾರಣಿ. ೧೯೫೨ ರಿಂದಲೂ ಅವರು ತಮ್ಮ ರೈತ ಸಂಘಟನೆಯ ನಡುವೆ ಪ್ರತಿ ಯೊಂದು ಚುನಾವಣೆಯಲ್ಲಿ ಆಳುವ ಪಕ್ಷದ ವಿರುದ್ಧ ಸ್ಪರ್ಧಿಸಿ, ತಮ್ಮ ಅನುಯಾಯಿಗಳೂ ಸ್ಪರ್ಧಿಸುವಂತೆ ಮಾಡಿದರು.

ದೇಸಾಯಿ ಚುನಾವಣೆಗಳ ಮೂಲಕ ಹೋರಾಡಿದ್ದು ಅಧಿಕಾರದ ಆಶೆಯಿಂದ ಅಲ್ಲ. ಹಾಗಿದ್ದರೆ ಆಳುವ ಪಕ್ಷದ ಬಾಲ ಹಿಡಿದು ಎಂದೋ ಮಂತ್ರಿಯಾಗಿ ಬಿಡುತ್ತಿದ್ದರು. 'ನನ್ನ ಚುನಾವಣಾ ಹೋರಾಟದ ಉದ್ದೇಶಗಳಲ್ಲಿ, ನಿರಕ್ಷರಿಗಳೇ ತುಂಬಿರುವ ನಮ್ಮ ಮತದಾರರಿಗೆ ರಾಜಕೀಯ ಶಿಕ್ಷಣ ಸಿಗಲಿ ಎಂಬುದೂ ಒಂದು' ಎಂದು ಅವರೇ ಸ್ಪಷ್ಟಪಡಿಸಿದ್ದುಂಟು. ಚುನಾವಣಾ ಕಣದಲ್ಲಿ ಸೋತದ್ದೇ ಹೆಚ್ಚು. ಆ ಸೋಲಿಗೂ ಜನರ ರಾಜಕೀಯ ಅಜ್ಞಾನವೇ ಕಾರಣ. ಸೋತಂತೆಲ್ಲ ಅವರ ಹೋರಾಟದ ಮನಸ್ಸಿಗೆ ಮತ್ತೆ ಭೀಮಬಲ ಬರುತ್ತಿತ್ತು.

'ಹೋರಾಟದೊಳಗುಂಟು ನಿಜವಾದ ಗೆಲುವು
ಹೋರಾಡಿ ಹೋರಾಡಿ ಸೋತರೂ ಚೆಲುವು
ಪ್ರತಿಯೊಂದು ಸಲ ನಾನು ಸೋತೆ ಪಾರಾಯಣ,
ಮತ್ತಷ್ಟು ಮಿರುಗುತಿದೆ ನನ್ನ ದೃಢಕಾಯ!'

(ದಿನಕರ ದೇಸಾಯಿ)

೧೫ ವರ್ಷಗಳ ನಂತರ (೧೯೫೭ರಿಂದ ೧೯೭೨), ದಿನಕರರು ಬೇಡವೆಂದರೂ ಜಯದ ಮಾಲೆ ಅವರನ್ನು ಹುಡುಕಿಕೊಂಡು ಬಂದಿತ್ತು. 'ಕಾರವಾರ' ಮತದಾರ ಕ್ಷೇತ್ರವನ್ನು ದೇಸಾಯಿ ದೆಹಲಿಯ ಸಂಸತ್ತಿನಲ್ಲಿ ಪ್ರತಿನಿಧಿಸಿದರು.

ಸೋತಾಗ ಯಾವ ನಿರ್ಲಿಪ್ತತೆ ಅವರಲ್ಲಿ ಕಾಣಬಹು ದಾಗಿತ್ತೋ ಅದೇ ನಿರ್ಲಿಪ್ತತೆ ಗೆದ್ದಾಗಲೂ ಕೂಡ. ಆದರೆ ಜನತೆ

ಹೊರಿಸಿದ ವಿಶ್ವಾಸದ ಹೊಣೆಯನ್ನು ಮಾತ್ರ ಎಂದೂ ಮರೆತವರಲ್ಲ.

ಒಮ್ಮೆ, ಆಗಿನ ಪ್ರಧಾನಿ ಶ್ರೀಮತಿ ಇಂದಿರಾ ಗಾಂಧಿಯವರು ದಿನಕರ ದೇಸಾಯಿಯವರನ್ನು–ತಾವು ಸಂಸತ್ ಸದಸ್ಯರಿಗೆ ವ್ಯವಸ್ಥೆ ಮಾಡಿದ–ಭೋಜನಕೂಟಕ್ಕೆ ಆಮಂತ್ರಿಸಿದ್ದರು. ದೇಶದ ಮೂಲೆ ಮೂಲೆಗಳಿಂದ ಬಂದ ಸಂಸತ್ ಸದಸ್ಯರನ್ನು ಸರದಿಯ ಪ್ರಕಾರ ಪರಿಚಯ ಮಾಡಿಕೊಳ್ಳುವುದೇ ಭೋಜನ ಕೂಟದ ಉದ್ದೇಶವಾಗಿತ್ತು. ದಿನಕರ ದೇಸಾಯಿ ಪ್ರಧಾನಿಗಳ ಆಮಂತ್ರಣವನ್ನು ಸೌಜನ್ಯದಿಂದಲೇ ತಿರಸ್ಕರಿಸಿಬಿಟ್ಟರು. ಅವರು ಅದಕ್ಕೆ ನೀಡಿದ ಕಾರಣ–'ನನಗೆ ಅದೇ ವೇಳೆ ಇನ್ನೊಂದು ಉಪ–ಸಮಿತಿಯ (ಶಿಕ್ಷಣಕ್ಕೆ ಸಂಬಂಧಿಸಿದ್ದು) ಮೀಟಿಂಗಿದೆ. ಊಟಕ್ಕಿಂತ ಮೀಟಿಂಗು ಮುಖ್ಯ' ಎಂಬುದಾಗಿತ್ತು!

ಸರ್ವಂಟ್ಸ್ ಆಫ್ ಇಂಡಿಯಾ ಸೊಸೈಟಿಯ ಆಜೀವ ಸದಸ್ಯ ಯಾವುದೇ ರಾಜಕೀಯ ಪಕ್ಷದ ಸದಸ್ಯನಾಗಿರಬಾರದು. ದಿನಕರ ದೇಸಾಯಿ ಪ್ರತಿಯೊಂದು ಸಾರೆಯೂ ಸ್ವತಂತ್ರ ಉಮೇದುವಾರನಾಗಿ ಸ್ಪರ್ಧಿಸಿದ್ದುಂಟು. ಸಮಾಜವಾದಿ ಸಮಾಜ ವ್ಯವಸ್ಥೆಯಲ್ಲಿ ದೃಢವಾದ ನಂಬಿಕೆಯಿದ್ದುದರಿಂದ ಪಿ. ಎಸ್. ಪಿ. ಯ ಸಹ-ಸದಸ್ಯರಾಗಿ ಪಾರ್ಲಿಮೆಂಟಿನಲ್ಲಿ ಕೆಲಸ ಮಾಡಿದ್ದಿದೆ. ಆ ಪಕ್ಷದ ಉಮೇದುವಾರರ ಗೆಲುವಿಗಾಗಿ ಪ್ರತಿಸಲ ಪರಿಶ್ರಮಿಸಿದ್ದೂ ಇದೆ.

## ೧೩. ಉತ್ತಮ ಸಂಸದೀಯ ಪಟು

ಸಂಸತ್ತಿನಲ್ಲಿ ದಿನಕರ ದೇಸಾಯಿ ಮಾತನಾಡಲು ನಿಂತಾಗ ಅವರ ಬತ್ತಳಿಕೆಯಲ್ಲಿ ಎಲ್ಲ ಬಗೆಯ ಅಸ್ತ್ರ-ಪ್ರತ್ಯಸ್ತ್ರಗಳು ಸಿದ್ಧವಾಗಿರುತ್ತಿದ್ದವು. 'ಇಂದಿರಾ ಗಾಂಧಿಯವರ ಕಾಂಗ್ರೆಸ್ ಸರಕಾರದ ಆರ್ಥಿಕ ಪುರುಷ ಅರ್ಧಾಂಗವಾಯು ಬಡಿದು ಮಲಗಿದ್ದಾನೆ; ಎತ್ತುವವರಿಲ್ಲ' ಎಂದಾಗ ಅಂದಿನ ಲೋಕ ಸಭಾಧ್ಯಕ್ಷರಾದ ಸಂಜೀವ ರೆಡ್ಡಿಯವರನ್ನೊಳಗೊಂಡು ಎಲ್ಲರೂ ನಕ್ಕಿದ್ದರಂತೆ. ತಮ್ಮ ಮಾತು ಕೇವಲ ಟೀಕೆಗಾಗಿ ಮಾಡಿದ ಟೀಕೆಯಲ್ಲ ಎಂಬುದನ್ನೂ ಅವರು ಅಂಕೆ-ಅಂಶಗಳನ್ನು ನೀಡಿ ಸಮರ್ಥಿಸಿಕೊಳ್ಳುತ್ತಿದ್ದರು.

ಇದಕ್ಕಿಂತ ಪೂರ್ವದಲ್ಲಿ ೧೪ ವರ್ಷಗಳ ಕಾಲ (೧೯೪೮ರಿಂದ ೬೨) ದಿನಕರ ದೇಸಾಯಿ ಮುಂಬಯಿ ಮಹಾನಗರ ಪಾಲಿಕೆಯಲ್ಲಿ ವಿರೋಧಿ ಬಣದ ಒಬ್ಬ ಕ್ರಿಯಾಶೀಲ ಸದಸ್ಯರಾಗಿ (ಗಿರಿಗಾಂವ್ ಮತಕ್ಷೇತ್ರದಿಂದ) ಸೇವೆ ಸಲ್ಲಿಸಿದ್ದುಂಟು. ಆ ಅವಧಿಯಲ್ಲಿ ದೇಸಾಯರ ಪ್ರಯತ್ನದಿಂದ ಮುಂಬಯಿ ನಗರ ಪಾಲಿಕೆ ಮಾಡಿದಷ್ಟು ಕೆಲಸವನ್ನು ಆ ನಂತರದ ಅವಧಿಯಲ್ಲಿ-ಅದೇ ಪ್ರಮಾಣದಲ್ಲಿ ಕಾಣುವುದಕ್ಕೆ ಎಂದೂ ಸಾಧ್ಯವಾಗಿಲ್ಲ ಎಂದು ಅವರೊಂದಿಗೆ ಆ ಕಾಲದಲ್ಲಿ ಇದ್ದು ಕೆಲಸ ಮಾಡಿದ-ಅನೇಕರು ಅಭಿಪ್ರಾಯ ಪಟ್ಟಿದ್ದಾರೆ. ಆಳುವ ಕಡೆಯ ಸದಸ್ಯರೂ ಕಣ್ಣು-ಕಿವಿ ಅರಳಿಸಿ ಆಲಿಸುವಂತಹ ಮಾತುಗಾರಿಕೆ ದಿನಕರ ದೇಸಾಯಿಯಂದಾಗಿತ್ತಂತೆ.

ಲೋಕಶಾಹಿಯಲ್ಲಿ ಸಮರ್ಥವಾದ ವಿರೋಧಿಪಕ್ಷವಿಲ್ಲದೆ ಜನಹಿತದ ಕೆಲಸ ಆಗಲಾರದೆಂಬುದು ದಿನಕರ ದೇಸಾಯರ ಅಚಲವಾದ ನಂಬಿಕೆ. ನೂರೆಂಟು ರಾಜಕೀಯ ಪಕ್ಷಗಳಿರುವುದರ ಬದಲು ಎರಡು, ಹೆಚ್ಚೆಂದರೆ ಮೂರು ಪಕ್ಷಗಳಿರುವ ಪ್ರಜಾ ಪ್ರಭುತ್ವ ವ್ಯವಸ್ಥೆ ಭಾರತದಲ್ಲಿರಬೇಕೆಂಬುದು ಅವರ ಸಲಹೆ ಯಾಗಿತ್ತು.

೧೯೭೧ರ ಚುನಾವಣೆಯ ವೇಳೆ, ಅಂದಿನ ಆಳುವ ಇಂದಿರಾ ಕಾಂಗ್ರೆಸ್ಸಿನ ಮುಖ್ಯಮಂತ್ರಿಗಳಾದ ಶ್ರೀಮಾನ್ ಡಿ. ದೇವರಾಜ ಅರಸರಿಂದಲೇ ನೇರವಾಗಿ ಆಮಂತ್ರಣವಿದ್ದಾಗ್ಯೂ, ಅದನ್ನು ಅಂಗೀಕರಿಸಿದರೆ ಕೇಂದ್ರದಲ್ಲಿ ಶಿಕ್ಷಣ ಸಚಿವರಾಗುವ ಎಲ್ಲ ಅನುಕೂಲಗಳಿದ್ದಾಗ್ಯೂ, ದಿನಕರ ದೇಸಾಯಿ ಪಕ್ಷಾಂತರ ಮಾಡಿ ರಾಜಕೀಯ ಭ್ರಷ್ಟ ಎನ್ನಿಸಿಕೊಳ್ಳಲಿಲ್ಲ. ಹುಟ್ಟು ಸಮಾಜವಾದಿ ಸಾಯುವವರೆಗೂ ಸಮಾಜವಾದಿಗಳಾಗಿಯೇ ಉಳಿದರು.

## ೧೪. ಕವಿ ದಿನಕರ ದೇಸಾಯಿ

ವಿದ್ಯಾರ್ಥಿ ದೆಸೆಯಲ್ಲೇ ನಾಡಿನ ಗಣ್ಯ ಕವಿಗಳ ಪಂಕ್ತಿಗೆ ಸೇರಿದ್ದ ದಿನಕರ ದೇಸಾಯಿ ನವೋದಯ ಕಾಲದಲ್ಲಿ ಕಣ್ಬಿಟ್ಟು, ಪ್ರಗತಿಶೀಲರೊಳಗೆ ಪ್ರಮುಖರೆನ್ನಿಸಿಕೊಂಡವರು. ಸಂಕಲ ನದ ರೂಪದಲ್ಲಿ ಪ್ರಕಟವಾಗುವ ಮುನ್ನವೇ ದೇಸಾಯರ ಬಹಳಷ್ಟು ಜನಪ್ರಿಯ ಕವನಗಳು ಅಂದಿನ ಮಹತ್ವದ

ಸಾಹಿತ್ಯಾಂಕವಾದ 'ಜಯ ಕರ್ನಾಟಕ'ದಲ್ಲಿ ಪ್ರಕಟಗೊಂಡಿದ್ದವು.

ಇವರು ಮೈಸೂರಿನ ಮಹಾರಾಜಾ ಕಾಲೇಜಿನ ವಿದ್ಯಾರ್ಥಿಯಾಗಿದ್ದಾಗ, ಆ ಮಹಾ ಸಂಸ್ಥೆಯ 'ಕರ್ನಾಟಕ ಸಂಘ'ದವರು ಆಚಾರ್ಯ ಬಿ. ಎಂ. ಶ್ರೀ ಯವರ ಸಂಪಾದಕತ್ವದಲ್ಲಿ ಹೊರತಂದ 'ತಳಿರು' ಎಂಬ ಕವನ ಗುಚ್ಛದಲ್ಲಿ ದಿನಕರರ 'ಭಿಕ್ಷುಕರು', 'ಅಂಚೆಯವನು', 'ಗೊಲ್ಲನಬಾಳು' ಹಾಗೂ 'ದೀನಗಿಂತ ದೇವ ಬಡವ' ಎಂಬ ನಾಲ್ಕು ಕವನಗಳು ಸೇರ್ಪಡೆಯಾಗಿದ್ದವು. ಒಟ್ಟೂ ಹನ್ನೆರಡು ಜನರ ಇಪ್ಪತ್ತೊಂಬತ್ತು ಕವನಗಳನ್ನೊಳಗೊಂಡ ಆ ಸಂಕಲನದಲ್ಲಿ ದಿನಕರರ ನಾಲ್ಕು ಕವನಗಳು ಸೇರ್ಪಡೆಯಾಗಿದ್ದು, ಬಿ. ಎಂ. ಶ್ರೀ ಯಂಥ ವಿದ್ವಾಂಸರೂ ಕೂಡ ದೇಸಾಯಿಯರಲ್ಲಿರುವ ಕಾವ್ಯಶಕ್ತಿಯನ್ನು-ಆ ಎಳೆಯ ದಿನಗಳಲ್ಲೇ-ಗುರುತಿಸಿದ್ದರು ಎಂಬುದಕ್ಕೆ ನಿದರ್ಶನವಾಗಿದೆ.

ದಿನಕರ ದೇಸಾಯಿ ಪ್ರಾರಂಭದಲ್ಲಿ ತಮ್ಮ ಕಾವ್ಯಮಾಧ್ಯಮವಾಗಿ ಷಟ್ಪದಿಯನ್ನೇ ಆರಿಸಿಕೊಂಡರು. ಪ್ರಾಸಬದ್ಧ ಕಾವ್ಯ ಬರೆಯುವ ಗೀಳು ಅವರಿಗೆ ಅಲ್ಲಿಂದಲೇ ಅಂಟಿಕೊಂಡದ್ದು ಎನ್ನಬಹುದು. ಮುಂದೆ ಬಿ. ಎಂ. ಶ್ರೀ ಯವರು ಪ್ರಕಟಿಸಿದ 'ಇಂಗ್ಲಿಷ್ ಗೀತಗಳು' ಸಂಕಲನವನ್ನು ಓದಿದ ಮೇಲೆ ತಮ್ಮ ಕಾವ್ಯ ಮಾಧ್ಯಮವನ್ನು ಬದಲಾಯಿಸಿಕೊಂಡದ್ದಾಗಿಯೂ, 'ಇಂಗ್ಲಿಷ್ ಗೀತಗಳು' ತನ್ನ ಮೇಲೆ ಬಹಳಷ್ಟು ಪ್ರಭಾವ ಬೀರಿತ್ತೆಂದೂ ಅವರೇ ಹೇಳಿಕೊಂಡಿದ್ದಾರೆ.

ಕನ್ನಡ ಸಾರಸ್ವತಪ್ರಪಂಚಕ್ಕೆ ದಿನಕರ ದೇಸಾಯಿ ಕೊಡುಗೆ ಗಮನಾರ್ಹವಾದುದು. ಗ್ರಂಥರೂಪದಲ್ಲಿ ಬಂದ ಹತ್ತೊ ಹನ್ನೆರಡೊ ಹೆಸರುಗಳನ್ನು ಹೇಳಬಹುದಾದರೂ, ಪ್ರಭಾವದ ದೃಷ್ಟಿಯಿಂದ ದಿನಕರ ದೇಸಾಯಿ ತಮ್ಮದೇ ಆದ ಒಂದು ಹೊಸ ಪರಂಪರೆಯನ್ನೇ ಸೃಷ್ಟಿಸಿದವರು; ನೂರ್ಕಾಲ ನಿಲ್ಲುವಂಥ ಕೃತಿಗಳನ್ನು ಕೊಟ್ಟವರು.

'ಕವನ ಸಂಗ್ರಹ', 'ಹೊಗೊಂಚಲು', 'ದಾಸಾಳ' ಇವು ದಿನಕರರು ಪ್ರಕಟಿಸಿದ ಭಾವಗೀತಗಳ ಸಂಕಲನವಾದರೆ, 'ಮಕ್ಕಳ ಗೀತಗಳು', 'ಮಕ್ಕಳ ಪದ್ಯಗಳು' ಎಂಬ ಎರಡು ಶಿಶುಗೀತಗಳ ಸಂಕಲನವನ್ನೂ ಹೊರತಂದಿದ್ದಾರೆ. ಉಲ್ಲೇಖಿಸಬೇಕಾದ ಅಂಶವೆಂದರೆ ಇತ್ತೀಚೆಗೆ ಪ್ರಕಟವಾದ 'ದಾಸಾಳ' ವೊಂದನ್ನುಬಿಟ್ಟರೆ,ದೇಸಾಯರ ಈ ಮೇಲಿನ ಯಾವ ಕೃತಿಯೂ ಈಗ ಮಾರ್ಕೆಟಿನಲ್ಲಿ ಓದುಗರಿಗಾಗಿ ಲಭ್ಯವಿಲ್ಲ. ಮರು ಮುದ್ರಣಕ್ಕಾಗಿ ದಶಕಗಳಷ್ಟು ಹಿಂದೆಯೇ ಬೇಡಿಕೆ ಬಂದಿದ್ದರೂ ಅವರು ಅದನ್ನು ತಲೆಗೆ ಹಾಕಿಕೊಳ್ಳಲಿಲ್ಲ. ಆದರೆ ತಮ್ಮ ಮರಣಕ್ಕೆ ಸ್ವಲ್ಪ ಮೊದಲು ಆಯ್ದ ಕವನಗಳ ಎರಡು ಸಂಕಲನ ವನ್ನು(ಒಂದು ಭಾವಗೀತೆಗಳದ್ದಾದರೆ, ಇನ್ನೊಂದು ಶಿಶುಗೀತ-ಗಳದ್ದು) ಹೊರ ತರಲು ಒಪ್ಪಿ, ಆಯ್ದ ಶಿಶುಗೀತಗಳ ಸಂಕಲನ ವನ್ನು 'ಮಕ್ಕಳ ಪದ್ಯ' ಎಂಬ ಹೆಸರಿನಲ್ಲಿ ಪ್ರಕಟಿಸಿದರು.

ಆಯ್ದ ಭಾವಗೀತಗಳ ಸಂಕಲನಕ್ಕಾಗಿ ಉತ್ತಮ ಕವನ ಗಳನ್ನು ಆಯ್ಕೆಮಾಡಿ, 'ಅವು ಯಾಕೆ ಉತ್ತಮ ?' ಎಂಬ ಟಿಪ್ಪಣಿಯನ್ನೂ ಆಯಾ ಕವನಗಳ ಹೆಸರಿನ ಮುಂದೆ ಬರೆದಿಡ

ಬೇಕೆಂದು ಅವರು ತಮ್ಮ ಅಂಕೋಲಾ ವಾಸ್ತವ್ಯದ ಅವಧಿಯಲ್ಲಿ ಪ್ರಸ್ತುತ ಲೇಖಕನನ್ನು ಕೇಳಿಕೊಂಡಿದ್ದರು. ಆ ಕೆಲಸವನ್ನು ನಾನು ಪೂರೈಸಿದ್ದಾಗಿ ಪತ್ರ ಬರೆದೆ. 'ನವೆಂಬರ್ ತಿಂಗಳಲ್ಲಿ (೧೯೮೨) ನಾನು ಅಂಕೋಲೆಗೆ ಬರುತ್ತೇನೆ. ಆಗ ಇಬ್ಬರೂ ಕೂತು ಸಂಕಲನಕ್ಕೆ ಅಂತಿಮ ರೂಪ ಕೊಡೋಣ' ಎಂಬ ಉತ್ತರ ಮುಂಬಯಿಯಿಂದ ಬಂದಿತ್ತು. ನವೆಂಬರ್ ತಿಂಗಳು ಬಂತು. ಅವರು ಬರಲಿಲ್ಲ. ನವೆಂಬರ್ ೬ರಂದು ಅವರು ವಿಧಿವಶರಾದರು.

ಮೇಲೆ ಹೆಸರಿಸಿದ ಮೂರು ಕವನಸಂಕಲನಗಳಲ್ಲಿ ದೇಸಾಯಿಯರು ಬರೆದ ಒಟ್ಟಿಗೆ ಇನ್ನೂರಾ ಎಂಬತ್ತೈದು(ಕೆಲವು ಹನಿ ಗವನಗಳೂ ಸೇರಿ) ಭಾವಗೀತಗಳಿವೆ. ಅವುಗಳ ಹೊರತಾಗಿ ೨೫೦೦ ಚುಟುಕಗಳ ಬೃಹತ್‌ಸಂಕಲನ 'ದಿನಕರನ ಚೌಪದಿ'ಬೇರೆ ಇದೆ. ಇವಲ್ಲದೆ, ಕವನ ಸಂಗ್ರಹಕ್ಕಿಂತ ಮೊದಲೇ ಅಚ್ಚಾದ 'ಕನ್ನಡ ಹಾಡುಗಳು' (೧೯೪೯), 'ರೈತರ ಹಾಡುಗಳು' (೧೯೫೦)ಎಂಬ ಪದ್ಯ ಪುಸ್ತಿಕೆಗಳೂ ಇವೆ.

## ೧೫. ಸುಂದರ ಗದ್ಯ

ದೇಸಾಯಿ ಪದ್ಯವನ್ನು ಬರೆದಷ್ಟೇ ಸಮರ್ಥವಾಗಿ ಗದ್ಯವನ್ನೂ ಬರೆಯಬಲ್ಲರೆಂಬುದಕ್ಕೆ ಅವರ ಸುಪ್ರಸಿದ್ಧ ಪ್ರವಾಸ ಕಥನ 'ನಾ ಕಂಡ ಪಡುವಣ' ಗ್ರಂಥವನ್ನು ಒಮ್ಮೆ ಓದಿ ಅದರ ಸ್ವಾದವನ್ನು ಅನುಭವಿಸಬೇಕು. ದಿನಕರರು ಅಂತರ್‌ರಾಷ್ಟ್ರೀಯ

ಕಾರ್ಮಿಕ ಪರಿಷತ್ತಿಗೆಂದು ಭಾರತದ ಕಡೆಲ ಕೆಲಸಗಾರರ ಸಂಘದ ಪ್ರತಿನಿಧಿಯಾಗಿ ಕೋಪನ್‌ಹೇಗನ್ ಹಾಗೂ ಬ್ರಿಟನ್ನಿನಲ್ಲಿ ಸಂಚರಿಸಿದಾಗಿನ ಕಥೆ ಆ ಗ್ರಂಥದಲ್ಲಿದೆ. ಶುಷ್ಕವಾಗಿ ಬಿಡಬಹುದಾದ ತಮ್ಮ ಪರ್ಯಟನಾವಧಿಯ ವಿವರವನ್ನು ಒಂದು ಸುಂದರ ಕಾವ್ಯವೊ ಎಂಬಂತೆ ದೇಸಾಯಿ ಆ ಗ್ರಂಥದಲ್ಲಿ ಚಿತ್ರಿಸಿದ ರೀತಿ ಅನನ್ಯವಾದುದು. ಅಂತೆ, ಪ್ರಪಂಚದ ಕೆಲಸಗಾರರ ಬದುಕು ಹಾಗೂ ಅವರ ಬದುಕಿನ ಪ್ರಗತಿಗಾಗಿ ಶ್ರಮಿಸುತ್ತಿರುವ ಅಂತರ್‌ರಾಷ್ಟ್ರೀಯ ಕಾರ್ಮಿಕ ಸಂಘ(ಜಿನೀವಾದಲ್ಲಿದೆ)ಗಳ ಬಗ್ಗೆ ಪರಿಚಯಿಸುವ ಇನ್ನೊಂದು ಗದ್ಯಗ್ರಂಥ 'ಪ್ರಪಂಚದ ಕೆಲಸಗಾರ'. 'ಜನಸೇವಕ' ವಾರಪತ್ರಿಕೆಯಲ್ಲಿ ಸತತ ಹದಿನೇಳು ವರ್ಷಗಳಕಾಲ ಪ್ರತಿವಾರವೂ ಬರೆಯುತ್ತಿದ್ದ ಅವರ ಮುಖಪುಟದ ಲೇಖನ ಹಾಗೂ ಸಂಪಾದಕೀಯ ಓದಿದವರಿಗೆ ದಿನಕರ ದೇಸಾಯಿ ಎಷ್ಟು ಮಹತ್ವದ ಗದ್ಯಲೇಖಕ ಎನ್ನುವುದು ಮನದಟ್ಟಾಗುತ್ತದೆ.

'ಸುಲಿದ ಬಾಳೆಯ ಹಣ್ಣಿನಂದದಿ' ಎಂಬ ಮಾತು ದಿನಕರರ ಗದ್ಯಶೈಲಿಗೆ ಸಂಪೂರ್ಣ ಅನ್ವಯಿಸುತ್ತದೆ (ಪದ್ಯಕ್ಕೂ ಕೂಡ). ಭಾಷೆ ಅತಿ ಸಂಕೀರ್ಣವಾದರೆ ಭಾವನೆಯ ಸೌಂದರ್ಯ ಕೆಡುತ್ತದೆಯೆಂಬುದು ಅವರ ನಂಬಿಕೆ.

ಸರಳವಿದ್ದರೂ ದೇಸಾಯಿ ಗದ್ಯಕ್ಕಿರುವ ಕಸುವು ಕಡಿಮೆಯದಲ್ಲ. ಅದು ಹೊರನೋಟಕ್ಕೆ ಉತ್ತರ ಕನ್ನಡದ ಗಿರಿಯಿಂದ ನಿರಾಡಂಬರವಾಗಿ ಹರಿದು ಬರುವ ಝರಿಯಂತೆ ಕಂಡರೂ ಪರಿಣಾಮದ ದೃಷ್ಟಿಯಿಂದ ಜೋಗದ ಜಲಧಾರೆಯಂತೆ ಅಸಾಧಾರಣ.

## ೧೬. ಕೊಂಕಣಿ ಹಾಡುಗಳು

ದೇಸಾಯರು ಕನ್ನಡ ಮಾತ್ರವಲ್ಲದೆ ಕೊಂಕಣಿ ಹಾಗೂ ಇಂಗ್ಲಿಷ್ ಭಾಷೆಗಳಲ್ಲೂ ಪ್ರಬುದ್ಧ ಲೇಖಕರೆನ್ನಿಸಿಕೊಂಡವರು. ಕೊಂಕಣಿ ಅವರ ಮನೆಯ ಭಾಷೆ. ಐವತ್ತು ವರ್ಷಗಳ ಹಿಂದೆಯೇ ಅವರು ಬರೆದ 'ಪಾಳಣೊ' ಎಂಬ ಕೊಂಕಣಿಯ ಜೋಗುಳ ಹಾಡು ಇಂದು ಕೊಂಕಣಸೀಮೆಯ ಹೆಂಗಸರ ಬಾಯಲ್ಲಿ ಜಾನಪದ ಹಾಡಿನಂತೆ ಹಾಸುಹೊಕ್ಕು. ಬೇರೆ ಬೇರೆ ವಸ್ತು- ಗಳನ್ನು ಆಧರಿಸಿ ಬರೆದ ಒಟ್ಟು ಇಪ್ಪತ್ತಾರು ಕೊಂಕಣಿ ಹಾಡುಗಳನ್ನು ಸೇರಿಸಿ 'ದಿನಕರಾಲಿ ಕವನಾ' ಎಂಬ ೮೦ ಪುಟಗಳ ಒಂದು ಸಂಕಲನವನ್ನು ಪ್ರಕಟಿಸಿದ್ದೂ ಉಂಟು.

ದೇಸಾಯರು ತಮ್ಮ ಹದಿಹರೆಯದ ಅವಧಿಯಲ್ಲಿ ಬರೆದ ಅನೇಕ ಕೊಂಕಣಿ ಗೀತಗಳು ಅರ್ಧಶತಮಾನ ಕಳೆದ ಮೇಲೆ ಇಂದಿಗೂ ಜೀವಂತವಾಗಿವೆಯೆಂಬುದು ಸಾಧಾರಣ ಸಂಗತಿ- ಯೇನಲ್ಲ. 'ಶಾಂತೂಲೆ ಬಿರಾಡ' (ಶಾಂತೂಳ ಮನೆ), 'ಪಾವಸಾಳೊ ದೀಸ' (ಮಳೆಗಾಲದ ದಿವಸ), 'ಅಕ ಆನಿ ಬಾವೋಜಿ' (ಅಕ್ಕ ಮತ್ತು ಬಾವಯ್ಯ), 'ಕಾವೇರ್ಯಾಕ' (ಕಾವೇರಿ ಅಕ್ಕ), 'ಉನಾಡ ನಾಗೇಶ' (ಉಂಡಾಡಿ ನಾಗೇಶ), 'ಏಂದರಾಲಿ ಕಾಣಿ' (ಇಲಿಗಳ ಹಾಡು), 'ಗೊಜಡಿ' (ಕೌದಿ), 'ಸ್ವರ್ಗಾವೈಲೊ ದೇವ'(ಸ್ವರ್ಗದಲ್ಲಿಯ ದೇವರು), 'ಬುಕಲೊ' (ಗಂಡುಬೆಕ್ಕು), 'ಲಿಲೂಲಿ ಸೊಯರಿಕ್' (ಲಿಲೂಳ ಮದುವೆ ನಿಶ್ಚಯ) ಮುಂತಾದವು ಮಕ್ಕಳಿಂದ ಮುದುಕರವರೆಗೆ

ಅವರವರ ರುಚಿ ಭಾವಗಳಿಗೆ ತಕ್ಕ ಹಾಗೆ ಸಂತೋಷ ನೀಡುವ ಕವನಗಳಾಗಿವೆ.

'ಉನಾಡ ನಾಗೇಶ', 'ಕಾವೇರ‍್ಯಾಕ್' ಮುಂತಾದ ವ್ಯಂಗ್ಯ ಮತ್ತು ತಿಳಿಹಾಸ್ಯ ಮಿಶ್ರಿತ ಕಥನಕವನಗಳಂತೂ ಕೊಂಕಣಿ ಬಲ್ಲವರಿಗೆಲ್ಲ ಬಹು ಆತ್ಮೀಯವಾದ ಹಾಡುಗಳು.

'ಕಿರುವಟಿಕ ತೀ ಪುಡೀಚಿ ಬಾಟಲಿ
ಪೋಟ ವ್ಹಾಳ್ಯರ ಚಾಚಿ ಕಿಟಲಿ'—

ಈ ಚಿತ್ರಣ ಕೇಳಿ ಯಾರಿಗೆ ನಗು ಬರಲಿಕ್ಕಿಲ್ಲ ?... ಇಂಥ ಉಂಡಾಡಿ ನಾಗೇಶನ ಸೊಂಟದ ಗಂಟು ಒಂದು ದಿನ ಸಂತೆ ಬಾಜಾರಿನಲ್ಲಿ ಬಿಚ್ಚುತ್ತದಂತೆ—

'ಏಕ ದಿವಸ ಕಿರವಟ ಸುಟಲಿ
ಸಾತೇ ಬಾಜಾರಾತ್
ಭರಿಲ್ಯೆ ಸಾತೇ ಬಾಜಾರಾತ್' ಎನ್ನುತ್ತಾರೆ,

ಅಂತೆ, ಮಕ್ಕಳಿಗಾಗಿಯೇ ಬರೆದ 'ಬುಕಲೊ' (ಗುಂಡುಬೆಕ್ಕು) ಕವನದ ಈ ಸಾಲುಗಳನ್ನು ನೋಡಿ :

'ಗುರು ಗುರು ಕರತಾ
ಕಾಳಕಾ ಫಿರತಾ
ಮಿಂದರಾ ಧರತಾ
ಮ್ಯಾಂವ್ ಮ್ಯಾಂವ್
ಮಿಂಯರೆ ಕರತಾ
ಕ್ಯಾಂವ್ ಕ್ಯಾಂವ್'

ಹಾಲುಹಲ್ಲಿನ ಹಸುಳೆಗಳಿಗೆ ಸಂತೋಷ ತುಂಬಿಸಿ ಕುಣಿಸಬಲ್ಲ ಇಂಥ ಸರಳ ಪ್ರಾಸಬದ್ಧ ಸಾಲುಗಳನ್ನು ದಿನಕರರ ಕನ್ನಡ ಶಿಶು-ಗೀತಗಳಲ್ಲೂ ನಾವು ಕಾಣುತ್ತೇವಷ್ಟೇ ?...

ಇವರು ಕೊಂಕಣಿಯಲ್ಲಿ ಬರೆದ 'ಸ್ವರ್ಗಾಪೈಲೊ ದೇವ', 'ಗೊಜಡಿ' ಕವನಗಳು ಕನ್ನಡದಲ್ಲೂ ಅನುವಾದಗೊಂಡಿವೆ (ಅವರೇ ಅನುವಾದಿಸಿದ್ದು). ಅಂತೆ ಕನ್ನಡದ ಸುಪ್ರಸಿದ್ಧ ಕವನ 'ದೀನಗಿಂತ ದೇವ ಬಡವ' ಕೊಂಕಣಿಯಲ್ಲೂ ಭಾವಾನುವಾದ-ಗೊಂಡಿರುವುದನ್ನು ಕಾಣುತ್ತೇವೆ. ಮುಂದುವರಿದಂತೆ ಕನ್ನಡ ಭಾಷೆಯನ್ನು ತಮ್ಮ ಅಭಿವ್ಯಕ್ತಿಯ ಸಶಕ್ತ ಮಾಧ್ಯಮವಾಗಿ ಬಳಸಿಕೊಂಡ ದಿನಕರ ದೇಸಾಯಿ, ಆರಂಭದ ದಿನಗಳಲ್ಲಿ ಸುಮಾರು ಒಂದು ದಶಕದಷ್ಟು ಕಾಲ (೧೯೩೦ ರ ದಶಕ) ಕೊಂಕಣಿಯ ಮೂಲಕ ವಿವಿಧ ಪ್ರಯೋಗಗಳನ್ನು ಮಾಡಿದವರಾಗಿದ್ದಾರೆ.

'ಮೊಗರೆ' ಎಂಬ ಕಾಲ್ಪನಿಕ ಕಾವ್ಯನಾಯಕಿಯ (ಪ್ರೇಯಸಿ) ಮೇಲೆ ಬರೆದ ಇವರ ಮೂರು ನಾಲ್ಕು ಹಾಡುಗಳಂತೂ ('ಮೊಗರೆ ಆಣಿ ಮೊಗರೆ ಫೂಲ', 'ಮೊಗರೆ ಕುಳಾರಾ ಗೆಲ್ಲೆ ತೆನ್ನಾ', 'ಮೊಗಾಲೊ ಉಗಡಾಸ', 'ತೆನ್ನಾ ಆಣಿ ಆಜ') ದೇಸಾಯರ ಪ್ರೇಮಗೀತೆಗಳ ಜಾಡನ್ನು ಕಂಡು-ಹಿಡಿಯುವವರಿಗೆ (ಕನ್ನಡವಿರಲಿ, ಕೊಂಕಣಿಯಿರಲಿ) ಉತ್ತಮ ಸ್ಯಾಂಪಲ್ಲುಗಳೆನ್ನಬೇಕು. ಸರಳ, ಸುಂದರ, ಸಹಜ ಸ್ತ್ರೀವರ್ಣನೆಯೊಂದಿಗೆ ನಯನಾಜೂಕಿನ ಪ್ರೇಮಭಾವವೂ ತುಂಬಿ ಕಣ್ಣು ಕುಕ್ಕುವ ಕವನಗಳಾಗಿವೆ ಅವು.

# ೧೭. ಕಾವ್ಯದ ಹಿರಿಮೆ

ದಿನಕರ ದೇಸಾಯರ ಕೃತಿಗಳನ್ನು ಅವಲೋಕಿಸಿದ ಯಾರಿಗೇ ಆದರೂ ಅವರ ಜನಸೇವಾದೀಕ್ಷೆಯ ಪ್ರಭಾವ ಅವುಗಳ ಮೇಲೆ ಆಗಿರುವುದು ಸಾಬೀತಾಗುತ್ತದೆ. ಈ ಮುಖ್ಯ-ಮೂಲಭೂತ ಅಂಶಗಳನ್ನು ಕಣ್ಮುಂದಿಟ್ಟುಕೊಳ್ಳದೆ ದೇಸಾಯರ ಸಾಹಿತ್ಯ ವಿಮರ್ಶೆಯನ್ನು ಮಾಡ ಹೊರಟವರು ಎಂದೂ ಅವರಿಗೆ ನ್ಯಾಯ ನೀಡಲಾರರು. ದಿನಕರರ ಕಾವ್ಯದ ತಾಯಿ ಬೇರು ಇರುವುದೇ ಹೆಚ್ಚಾಗಿ ಗ್ರಾಮೀಣ ಭಾರತದಲ್ಲಿ. ದೀನ-ದಲಿತರ, ಶೋಷಣೆಗೆ ಒಳಗಾದವರ, ನಿರಾಡಂಬರ ವ್ಯಕ್ತಿಗಳ ಬದುಕನ್ನು ಬಿಂಬಿಸುವ ಒಂದಲ್ಲ, ನೂರಾರು ಕವನಗಳನ್ನು ದೇಸಾಯಿ ಬರೆದಿದ್ದಾರೆ.

ಅವರಂತೆ ಬರೆದವರು, ಬರೆವಂತೆ ಬದುಕಿದವರು ಇನ್ನೊಬ್ಬ ಇದ್ದಾನೆ ಎಂದು ಹೇಳುವ ಛಾತಿ ನನಗಿಲ್ಲ. ಒಂದೇ ಮಾತಿನಲ್ಲಿ ಹೇಳಬಹುದಾದಲ್ಲಿ, ದಿನಕರ ದೇಸಾಯರ ಕಾವ್ಯ ನಿಜವಾದ ಅರ್ಥದಲ್ಲಿ ಜನಪರ ಕಾವ್ಯ; ಆ ಕಾರಣಕ್ಕಾಗಿಯೇ ದೇಸಾಯಿ ನಿಜವಾದ ಅರ್ಥದಲ್ಲಿ 'ಜನತಾ ಕವಿ'.

ಇಷ್ಟು ಹೇಳಿದ ಮಾತ್ರಕ್ಕೆ ಇವರ ಕಾವ್ಯಲಕ್ಷಣಗಳನ್ನೆಲ್ಲ ಹೇಳಿ ಮುಗಿಸಿದಂತೆಯೂ ಆಗುವುದಿಲ್ಲ. ಸಾಹಿತ್ಯವಿಮರ್ಶೆಯ ಮಾನದಂಡದಿಂದಲೂ ದೇಸಾಯಿ ಕವಿತೆಗಳ ವಿಶ್ಲೇಷಣೆ ಆಗ-ಬೇಕಾದದ್ದು ಇನ್ನೂ ಇದೆ. ದೇಸಾಯಿ ಕವನಗಳೆಲ್ಲ ಸರಳ ಶೈಲಿಯಲ್ಲಿರುವಂತೆ, ಅವರ ಕವಿತೆಗಳ ಅಂತರಾತ್ಮವನ್ನೂ

ಅತ್ಯಂತ ಸರಳೀಕರಿಸಿ ವ್ಯಾಖ್ಯಾನಿಸಿದ ವಿಮರ್ಶಕರೇ ಬಹಳ. ಯಾವ ಮಾನದಂಡವನ್ನಿಟ್ಟು ದೇಸಾಯರ ಕವಿತೆಗಳನ್ನಾಗಲಿ, ಚುಟಕಗಳನ್ನಾಗಲಿ ಅಳೆಯಬೇಕಾಗಿತ್ತೊ ಆ ಕೆಲಸವಿನ್ನೂ ಪೂರ್ತಿ ಆಗಿಯೇ ಇಲ್ಲ ಎಂಬುದು ನನ್ನ ಅನಿಸಿಕೆ.

ಹಿರಿಯ ವಿದ್ವಾಂಸ ಡಾ|| ವಿ. ಕೃ. ಗೋಕಾಕರು ದಿನಕರರ 'ಕವನ ಸಂಗ್ರಹ' ಎಂಬ ಹೆಸರಿನ ಪ್ರಥಮ ಸಂಕಲನಕ್ಕೆ ಬರೆದ 'ಮುನ್ನುಡಿ'ಯಲ್ಲಿ ಮೂವತ್ತೈದು ವರ್ಷಗಳಷ್ಟು ಹಿಂದೆಯೇ ಗುರುತಿಸಿದ ಈ ಮಾತುಗಳನ್ನು ನೋಡಿ:

"ದೇಸಾಯಿ ಕವನಗಳಲ್ಲಿಯ ಮೊದಲನೆಯ ಲಕ್ಷಣ ಅವು ಗಳಲ್ಲಿಯ ಭಾವನಿರ್ಭರತೆ. ಅನಿಸಿದ ಅನಿಸಿಕೆ ಕಾವ್ಯಮಯವ-ಹುದೋ ಅಲ್ಲವೊ ಎಂಬ ಶಂಕೆಯೇ ಇಲ್ಲಿ ಏಳುವುದಿಲ್ಲ. ಭಾವದ ಉತ್ಕಟತೆಯಲ್ಲಿಯೇ ಅದರ ಕಾವ್ಯಮಯತೆಯ ಉಗಮವಿದೆ. ಒಂದೊಂದು ಭಾವನೆಯೂ ವ್ಯಕ್ತಿತ್ವದ ಆಳ ದೊಳಗೆ ಮಿಂದು ಬರುತ್ತದೆ.

ಇವರ ಕವನಗಳ ಎರಡನೆಯ ಲಕ್ಷಣವೆಂದರೆ ಅವುಗಳ ನೇರತೆ, ಸಹಜಾಭಿವ್ಯಕ್ತಿ, ಸುಲಭವಾಗಿ, ನೇರವಾಗಿ ಎದೆ ಹೊಗುವ ಭಾಷೆಯಲ್ಲಿ ಅವರ ಕಾವ್ಯಲಕ್ಷ್ಮಿಯು ಪ್ರಕಟಳಾಗು-ತ್ತಾಳೆ..."

ಸರಳತೆ ದೇಸಾಯಿಯ ವೈಶಿಷ್ಟ್ಯ. ಕಾವ್ಯದ ಪ್ರಯೋಜನ ಜನಸಾಮಾನ್ಯರು ಪಡೆಯಬೇಕಾದರೆ ಭಾಷೆ ಸರಳವಾಗಿರ ಬೇಕೆಂಬುದು ದೇಸಾಯರ ಕರಾರುವಾಕ್ಕಾದ ಅಭಿಪ್ರಾಯ.

ಆದರೆ. ದೇಸಾಯಿ ಬಳಸುವ ಸರಳ ಶೈಲಿಯಲ್ಲಿ ಅವರಂತೆ ಮಾರ್ಮಿಕವಾಗಿ ವಿಷಯವನ್ನು ಪ್ರತಿಪಾದಿಸಬಲ್ಲ ವ್ಯಕ್ತಿ ಪ್ರಾಯಶ; ಕನ್ನಡದಲ್ಲಿ ಬೇರೊಬ್ಬ ಇಲ್ಲ. ಈ ಹಿನ್ನೆಲೆಯಲ್ಲಿ, 'ಕನ್ನಡಕ್ಕೆ ಒಬ್ಬನೇ ದಿನಕರರು' ಎಂಬ ಗೋಕಾಕರ ಮಾತಿಗೆ ಇಂದಿಗೂ ಬೆಲೆ ಇಲ್ಲದೇ ಇಲ್ಲ. ಉದಾ:

'ತಾಯಿಯು ದೇವರಿಗಿಂತಲು ಮೇಲು
ದೇವರ ಮೊಲೆಯಲಿ ದೊರೆವುದೆ ಹಾಲು ?'

('ತಾಯಿ')

ದೇಸಾಯರ 'ದೀನಗಿಂತ ದೇವ ಬಡವ' ಅತ್ಯಂತ ಸರಳ ವೈಕಟ್ಟಿನಲ್ಲೇ ಮೂಡಿ ಬಂದ ಒಂದು ಜನಪರ ಕವನ.

'ಹರಿಗೆ ಎಂದು ಗುಡಿಯನೊಂದ ಕಟ್ಟುತಿರುವೆಯಾ ?
ಹರಿಯ ಒಲುಮೆ ಪಡೆದು ಪುಣ್ಯ ಗಳಿಸುತಿರುವೆಯಾ?'-

ಎಂಬ ಪ್ರಶ್ನೆಯೊಂದಿಗೆ ಪ್ರಾರಂಭವಾಗುವ ಈ ಕವನವು ದೀನ ಮತ್ತು ದೇವ-ಈ ಇಬ್ಬರ ಬಗ್ಗೆ ತನ್ನದೇ ಆದ ರೀತಿಯಲ್ಲಿ ಓದುಗನನ್ನು ಆಳವಾಗಿ ಯೋಚಿಸುವಂತೆ ಮಾಡುತ್ತದೆ. 'ಜಗಕೆ ಗೋಡೆ ಹಾಕಿ ಗುಡಿಯ ಕಟ್ಟಬಲ್ಲೆಯಾ! ದೀನಗೊಂದು ಗೂಡು ಸಾಕು! ದೇವಗೊಂದು ವಿಶ್ವ ಬೇಕು' ಎಂಬ ಮಾತು ಕೇವಲ ಹೇಳಿಕೆಯಾಗುವುದಿಲ್ಲ; ಚಿರಕಾಲ ಉಳಿಯುವಂಥ ಸುಂದರ ಕಾವ್ಯವೂ ಆಗಿದೆ.

ಸಾಬೂನಿನಂಥ ತೀರಾ ಸಾಮಾನ್ಯ ವಸ್ತುವೂ ಕೂಡ ದಿನಕರ ದೇಸಾಯಿಯವರ ಕೈಯಲ್ಲಿ ಕಾವ್ಯಹೂವಾಗಿ ಅರಳಿ- ದ್ದುಂಟು__

'ಹೊರಗಿನ ಬಣ್ಣವು ಕೆಂಪಾಗಿದ್ದರೂ
ಹಳದಿ ನೀಲಿ ಎಂಥದು ಇದ್ದರೂ
ಹೃದಯದ ನೊರೆ ಸತತವು ಬಿಳಿ ಶುದ್ಧವು'-

ಎನ್ನುತ್ತ ಕವಿ ಮಾನವನ ಅಂತಃಕರಣ ಹೇಗಿರಬೇಕೆಂಬ ಬಗ್ಗೆ ತೋರುಬೆರಳನ್ನು ಇಡುತ್ತಾನೆ.

'ಕವನ ಸಂಗ್ರಹ' ದೊಳಗಿನ 'ಬಡತನ.' 'ಸ್ವರ್ಗ ಮತ್ತು ಭೂಮಿ', 'ಸ್ವರ್ಗ ಮತ್ತು ನರಕ', 'ಕಾಲಿನಜೋಡು' 'ಭಿಕ್ಷುಕರು', 'ಹರಿಜನರು', 'ಅಂಜೆಯುವನು', 'ಗಡಿಯಾರ', 'ಸಾಬೂನು', 'ದೀನಗಿಂತ ದೇವ ಬಡವ.' 'ನದಿಯ ಆತ್ಮ ಚರಿತ್ರ', 'ನನ್ನ ದೇಹದ ಬೂದಿ'. 'ಚೀನದ ಕ್ರಾಂತಿ'- ಮುಂತಾದ ಕವನಗಳಲ್ಲಿ ಸರಳತೆ ಹಾಗೂ ಭಾವನಿರ್ಭರತೆಯ ವಿಶಿಷ್ಟ ಗುಣಗಳೊಂದಿಗೆ ದಲಿತಪರವಾದ ಚಿಂತನೆಯನ್ನೂ ಪುಷ್ಕಳವಾಗಿ ಕಾಣಬಹುದು.

ಅದೇ ರೀತಿ, ಅದೇ ಮಾರ್ಗದಲ್ಲಿ 'ಹೂಗೊಂಚಲು' ಸಂಗ್ರಹದ 'ದೇವ ನೀನು ಸತ್ತರೇನು', 'ನಿರುದ್ಯೋಗಿಗಳ ಹಾಡು', 'ಕಲ್ಲು ಕುಟಿಗರು' 'ಬಿರುಗಾಳಿ' ಮುಂತಾದ ಕವನ ಗಳು ಸಾಗಿರುವುದನ್ನು ಕಾಣುತ್ತೇವೆ.

ಇತ್ತೀಚಿನ 'ದಾಸಾಳ' ಸಂಕಲನದ 'ಕೆಂಪು ದಾಸಾಳ' ಎಂಬ ಕವನವೂ ಕೂಡ ಬಹಳಷ್ಟು ಕಾರಣಗಳಿಗಾಗಿ ಒಂದು ಸಾರ್ಥಕ ಕವನ.

ಅವರ ಮರಣೋತ್ತರ ಇಚ್ಛೆಯನ್ನು ಧ್ವನಿಸುವ 'ನನ್ನ ದೇಹದ ಬೂದಿ' ಸೇವೆಯ ಪರಾಕಾಷ್ಠತೆಯನ್ನು ಧ್ವನಿಸುವ ಭಾವಗೀತ. ಬದುಕಿನುದ್ದಕ್ಕೂ ಜನಸೇವೆ ಮಾಡಿದರೂ ತೃಪ್ತಿಯಿಲ್ಲದ ಮನಸ್ಸು ಸತ್ತ ಮೇಲಾದರೂ ದೇಹ ಸೇವೆಗೆ ನಿಲಲಿ ಎಂದು ಹಾರೈಸುತ್ತಿದೆ. ತನ್ನ ದೇಹದ ಮುಷ್ಟಿ ಬೂದಿಯುಂಡು ಒಂದು ಮೀನ ಪುಷ್ಟವಾದರೂ ಸಾಕು, ಒಂದು ಕಮಲ ಅರಳಿನಿಂತರೂ ಸಾಕು, ಒಂದು ಗಟ್ಟಿಕಾಳಿನ ತೆನೆ ಒಗೆದು ಬಂದರೂ ಸಾಕು ಧನ್ಯವಾದಂತೆ ಹುಟ್ಟು ಸಾವಿನಲ್ಲಿ ಎಂದು ಹಂಬಲಿಸುತ್ತಾನೆ ಕವಿ. ದಿನಕರ ದೇಸಾಯಿ ಈ ಕವನ ಬರೆದದ್ದು ೧೯೪೭ರಷ್ಟು ಹಿಂದೆ. ಈ ಭಾವನೆ ಹೊತ್ತ ಪಂಡಿತ ಜವಾಹರಲಾಲ್ ನೆಹರೂ ಅವರ ಮರಣೋತ್ತರ ಆಶೆಯ ಹೇಳಿಕೆಯೊಂದು ೧೯೬೪ರಲ್ಲಿ ಪ್ರಕಟವಾದುದನ್ನೂ ಇಲ್ಲಿ ಸ್ಮರಿಸಬಹುದಾಗಿದೆ. ಹಿರಿಯ ಚೇತನಗಳು ಹೇಗೆ ಒಂದೇ ರೀತಿ ತುಡಿಯುತ್ತವೆಯೆಂಬುದನ್ನು ತಿಳಿಯುವ ಕಾರಣಕ್ಕಾಗಿ.

## ೧೮. ಸಮಾಜವಾದಿ ಧೋರಣೆ—ದಲಿತಪ್ರಜ್ಞೆ

ದೇಸಾಯಿ ಒಬ್ಬ ಅಪ್ಪಟ ಸಮಾಜವಾದಿ ಕವಿ. ಸಮಾಜವಾದಿ ಧೋರಣೆಗಳು, ಸಮಾಜವಾದದ ತತ್ವಗಳು ಹೇರಳವಾಗಿ ಅವರ ಕಾವ್ಯಗಳಲ್ಲಿ ಸಿಗುತ್ತವೆ. ಸಮಾಜವಾದಿ ಸಮಾಜ ರಚನೆಯ ದಿಕ್ಕಿನಲ್ಲಿ ಓದುಗನನ್ನು ಚಿಂತನೆಗೆ ಒಳಪಡಿಸುವುದೇ ದೇಸಾಯಿ ಕಾವ್ಯದ ಇನ್ನೊಂದು ವೈಶಿಷ್ಟ್ಯ ಎಂದರೆ ತಪ್ಪಾಗಲಾರದು. 'ಗಡಿಯಾರ' ಎಂಬ ಕವನದಲ್ಲಿ—

'ದುಡಿಯುವುದೊಂದೇ ಕೂಲಿಯ ಧರ್ಮ
ದುಡಿಸುವುದೊಂದೇ ಶ್ರೀಮಂತರ ಧರ್ಮ
ಇಂತಿಹುದೀ ಕಲಿಯುಗದ ಮರ್ಮ'—

ಎಂಬ ಮಾತುಗಳೊಂದಿಗೆ ಶ್ರೀಮಂತರು ಸೇವೆ ಪಡೆಯುವು-ದಷ್ಟೇ ತಮ್ಮ ಜನ್ಮಸಿದ್ಧ ಹಕ್ಕೆಂದು ಭಾವಿಸಿರುವುದನ್ನು ವಿಡಂಬಿಸುವ ಈ ಕವಿ 'ಕೆಂಪು ಬಾವುಟ' ಎನ್ನುವ ತಮ್ಮ ಪದ್ಯದಲ್ಲಿ—

'ಕೂಲಿಕಾರ ಒಕ್ಕಲಿಗರ ಬಲವು
ಮೀನುಗಾರ ಶ್ರಮಜೀವಿಯ ಕುಲವು
ಒಂದೆಡೆ ಸೇರಲು ಜನತೆಯ ಗೆಲವು'

ಎನ್ನುತ್ತಾನೆ. 'ಅಂಚೆಯವನು' ಎಂಬ ಪದ್ಯದಲ್ಲಿ—

'ಇದು ಧನಹೀನರ ಇದು ಹಣವಂತರ
ಇದು ಗುಣಹೀನರ ಇದು ಗುಣವಂತರ
ಕಾಗದವೆನ್ನುತ ಮಾಡೆನು ಅಂತರ'–

ಎಂಬಲ್ಲಿಯೂ ಕೂಡ ಅದೇ ಸಮತಾವಾದದ ಭಾವನೆ ತುಂಬಿಕೊಂಡಿದೆ. 'ಕೂಡಿ ಬಾಳಬೇಕು', 'ಹೊಂದಾಣಿಕೆಯೇ ಯಶಸ್ಸಿನ ಗುಟ್ಟು' ಎಂಬ ವಿಚಾರವನ್ನು ಕವಿ ತನ್ನ ಅನೇಕ ಹಾಡುಗಳಲ್ಲಿ ಮೂಡಿಸಿದ್ದನ್ನು ಕಾಣುತ್ತೇವೆ. ಅದಕ್ಕೆ ಒಂದು ಶ್ರೇಷ್ಠ ಉದಾಹರಣೆ 'ಕಾಲಿನ ಜೋಡು' ಎಂಬ ಕವನದ–

'ಬಲಗಾಲಿನ ಅಂಗುಷ್ಠವು ಹರಿಯೆ
ಎಡಗಾಲ್ಕೆರವೆ ಮುಂದಕೆ ಸರಿಯೆ

ಒಬ್ಬನ ಸಂಕಟವಿಬ್ಬರು ಅರಿಯೆ
ಮೇಲ್ಮೆಯು ಧರೆಯೊಳಗೆ'–

ಎಂಬೀ ಸಾಲುಗಳಲ್ಲಿ ಕಾಣಬಹುದಾಗಿದೆ. ದೇಸಾಯರಲ್ಲಿ ದಲಿತ ಸಮುದಾಯದ ಬಗ್ಗೆ ಇರುವ ಕಳಕಳಿ ಅವರ 'ಭಾರತ ಭೂಮಿಯ ಬಡತನ' ಎಂಬ ಕವನದಲ್ಲಿ ದಟ್ಟವಾಗಿ ಮೂಡಿ ಬಂದಿದೆ–

'ಕೋಟಿ ಮಾನವರ ಕಣ್ಣೀರು
ಹರಿದು ತುಂಬಲದು ಮುನ್ನೀರು'–

ಎಂಬಂಥ ಸಾಲುಗಳನ್ನು ನೆನೆಯಬಹುದು.

ದಿನಕರರ ಕಾವ್ಯಜಗತ್ತನ್ನೊಮ್ಮೆ ವಿಹರಿಸಿ ಬಂದವರಿಗೆ 'ದಲಿತವರ್ಗ'ದ ಬಗ್ಗೆ ಮಿಡಿದ ಅವರ ಪ್ರಾಮಾಣಿಕ ಮನಸ್ಸಿನ ದರ್ಶನ ಆಗಲೇಬೇಕು. ವಿದ್ಯಾರ್ಥಿ ಬದುಕಿನಲ್ಲಿ ಬರೆದ ಅವರ ಜನಪ್ರಿಯ ಕವನ 'ದಿನಗಿಂತ ದೇವ ಬಡವ'ದೊಳಗೇ ಅದು ಹಾಸುಹೊಕ್ಕಾಗಿದೆ.

'ಹುಚ್ಚ ನೀನು ಹಳ್ಳಿಗೋಡು
ದೀನ ಜನರ ಪಾಡ ನೋಡು
ಇರಲು ಗುಡಿಲು ಇಲ್ಲವಲ್ಲ
ಹೊಟ್ಟೆ ತುಂಬ ಅನ್ನವಿಲ್ಲ!'

ಅವರು ಬರೆದ 'ಹರಿಜನರು' ಕವನದ ಮೆಲುಕು ಇಲ್ಲಿ ಆಗ ಬೇಕು :

'ಆಗೇರ ಸೋಮೂ
ಮುಕ್ರೀ ಓಮೂ
ಹಳ್ಳೇರ ಖೇಮೂ ಹರಿಜನರೋ;
ಹಗಲೂ ಇರುಳೂ
ಬೆಳಗೂ ಬೈಗೂ
ದುಡಿದೂ ಹೊಟ್ಟೆಗೆ ಸಿಗವವರೊ'

ಶರಪಟ್ಟದಿ ಛಂದೋಬಂಧವನ್ನು ಹೋಲುವ ಈ ಹಾಡು ಉತ್ತರಕನ್ನಡದ ಪ್ರಮುಖ ಮೂರು ಹರಿಜನ ಜಾತಿ ಜನರ ನಿತ್ಯದ ಬದುಕಿನ ನೋವಿನ ಚಿತ್ರವನ್ನು ಕಣ್ಣಿಗೆ ಕಟ್ಟುತ್ತದೆ. ಹರಿಜನರ ಬವಣೆಗೆ ಇತಿ-ಮಿತಿಯೆಂಬುದಿಲ್ಲ :

'ಗುಡಿಸಲು ಸಣ್ಣ;
ತೊಯ್ದದೆ ಮಣ್ಣ,
ಸೋರುವುದಣ್ಣಾ ಅಲ್ಲಲ್ಲಿ!
ಮಡಕೆಯು ತುಂಡು;
ಸುತ್ತುವ ಮುಂಡು
ಜರಿ ಜರಿಯಾಗಿದೆ ಅಲ್ಲಲ್ಲಿ!'

ಇದು ದಲಿತರ ಬಾಳು. ಬಾಪೂಜಿಯೇನೊ ಇವರನ್ನು 'ಹರಿಜನರು' ಎಂದು ಶ್ರೀಮಂತ ಹೆಸರಿಟ್ಟು ಕರೆದರು. ಆದರೆ ಬಾಪೂಜಿ ತಂದ ಸ್ವಾತಂತ್ರ್ಯ ಬಂದು ದಶಕಗಳೇ ಉರುಳಿ ಹೋದರೂ ಇವರ ಸಮಸ್ಯೆಯ ಕತ್ತಲೆ ಕರಗಲಿಲ್ಲ. ಅದನು ಬಲ್ಲ ದೇಸಾಯಿ ಬಹು ಮಾರ್ಮಿಕವಾದ ವಸ್ತುಸ್ಥಿತಿಯೊಂದನ್ನು ತಮ್ಮ ಈ ಹಾಡಿನ ಕೊನೆಯಲ್ಲಿ ಹೇಳಿ ಮುಗಿಸಿದ್ದಾರೆ—

'ಬಂತು ಸ್ವರಾಜ್ಯಾ
ಆದರು ಭಾಗ್ಯಾ
ಹರಿಜನರೆಲ್ಲಾ, ನಿರ್ಬಲರೊ;
ಹರನೂ ನೋಡಾ!
ಹರಿಗೂ ಬೇಡಾ!
ಹೆಸರಿಗೆ ಮಾತ್ರಾ ಹರಿಜನರೊ!'

ದೇಸಾಯಿ ಬರೆದ 'ಬಡತನ' ಎಂಬ ಇನ್ನೊಂದು ಕವನ ಬಡತನದ ಬೇಗೆ ಸಹಿಸಲಾಗದೆ ಭಿಕ್ಷುಕನಾದವನ ದಯನೀಯ ಸ್ಥಿತಿಯೊಂದರ ಚಿತ್ರವೊಂದನ್ನು ಕಣ್ಣಿಗೆ ಕಟ್ಟುತ್ತದೆ. ಬಡತನದ ಬೇಗೆಯಲಿ ಬೆಂದ ಭಿಕ್ಷುಕನೊಬ್ಬ ಮಸಣದಲ್ಲಿ ಮಲಗಿದ್ದ ಹೆಣದ ಸಮೀಪ ಬಂದು. 'ಬಡತನದ ಭಾರವನು ಸ್ವಲ್ಪ ಹಿಡಿ.' ಎದ್ದೇಳು! ಬದುಕಿನನ್ನನು ತಲೆಯ ಭಾರದಿಂದ' ಎಂದು ಕೇಳಿ ಕೊಂಡಾಗ, 'ಬಡತನದ ಬಾಳ್ವೆಗಿಂತಲೂ ಮರಣವೇ ಲೇಸೆಂದು। ಒಪ್ಪಿಕೊಳ್ಳುವ ತೆರದಿ ಬಿದ್ದ ಹೆಣವು। ಮರುಮಾತನಾಡದೆಯೆ ಮೌನದಲ್ಲಿ ಮಲಗಿತ್ತು'—ಎಂದು ಕವಿ ಹೇಳುತ್ತಾರೆ. ಮತ್ತು 'ಬಡತನದ ಕೆಟ್ಟ ಋಣ ಹೀಗಿದೆ ನೋಡಿ!' ಎಂದು ಉದ್ಗಾರ ಎತ್ತುತ್ತಾರೆ.

ತೀರಾ ಹಿಂದುಳಿದ ದಲಿತವರ್ಗಕ್ಕೆ ಸೇರಿದ ಹಾಲಕ್ಕಿಗಳ ಕರಿತು ಈ ಕವಿ ಬರೆದ ಚೌಪದಿಯೊಂದು ಪ್ರಸಿದ್ಧವಾಗಿದೆ—

'ಇವನ ಮನೆಯೊಳಗಿಲ್ಲ ಸಾಕಷ್ಟು ಅಕ್ಕಿ
ಆದರೂ ಈತನಿಗೆ ಹೆಸರು ಹಾಲಕ್ಕಿ

ಹಾಲು ಅಕ್ಕಿಗಳೆರಡೂ ಹೆಸರೊಳಗೆ ಮಾತ್ರ
ಹಸಿವೆಯೆಂಬುದು ಇವನ ಹಣೆಯ ಕುಲಗೋತ್ರ'

ದೀನ-ದಲಿತರ ನೋವು-ನಷ್ಟಗಳ ಬಗ್ಗೆ ಸದಾ ಎಚ್ಚರದ ಕಣ್ಣುಳ್ಳ ದಿನಕರ ದೇಸಾಯಿ, ನಿಸರ್ಗದ ಅಂದ ಚೆಂದವನ್ನು ಕುರಿತು ಬಣ್ಣಿಸಲೆಂದೇ ತಮ್ಮ ಬರವಣಿಗೆಯನ್ನು ಮೀಸಲಾಗಿಟ್ಟವರಲ್ಲ :

'ಎಲೆ ಕವಿಯೆ ಸುಡು ನಿನ್ನ ಕವನಗಳ ಕೀರ್ತಿ
ತಿಳಿಬಾನು-ಗಿರಿಕಾನುಗಳೆ ನಿನ್ನ ಸ್ಫೂರ್ತಿ
ಕೇರಿ ಕೇರಿಗಳಲ್ಲಿ ಉರಿದರೂ ಜ್ವಾಲೆ
ಕವನ ಕಟ್ಟುವೆ ನೀನು ಮಲ್ಲಿಗೆಯ ಮೇಲೆ!'

ಇದು ದೇಸಾಯಿ ಕಾವ್ಯಮನೋಧರ್ಮವೆಂದರೂ ಸರಿಯೇ. ಅಂತೇ. ಅವರು ಬದುಕಿನಲ್ಲಿ ಸರಳ ಯಾವುದೊ, ಸಹಜ ಯಾವುದೊ. ಸದ್ದುಗದ್ದಲವಿಲ್ಲದ ಸೇವೆ ಯಾವುದೊ ಅದನ್ನು ಗುರುತಿಸುತ್ತಾರೆ, ಕೊಂಡಾಡುತ್ತಾರೆ. ಅವರ ಬಹಳಷ್ಟು ಕವನಗಳಲ್ಲಿ ಅದು ವ್ಯಕ್ತವಾಗಿದ್ದರೂ, ಸಾಮಾನ್ಯ ಜನತೆಯ ಆಶೋತ್ತರಗಳ, ಬದುಕಿನ ರೀತಿಯ ಪ್ರತೀಕವಾಗಿ ಬಂದ ಅವರ 'ದಾಸಾಳ' ಕವನದಲ್ಲಿ ಅದು ಇನ್ನಷ್ಟು ಸಾಂದ್ರವಾಗಿ ಮೂಡಿಬಂದಿದೆ:

"ಹೂ ಪ್ರದರ್ಶನದೊಳಗೆ
ಇದಕಿಲ್ಲ ಬಹುಮಾನ
ವೇಶ್ಯೆಯರ ಮುಡಿಯೊಳಗೆ ಇಲ್ಲ ಸ್ಥಾನ

ಈಶ್ವರನ ಗುಡಿಯೊಳಗೆ ಇದಕೆ ಮಾನ
ಟೊಂಗೆಯನು ನೆಟ್ಟರೂ
ಬದುಕಿಕೊಳ್ಳುವ ಜಾತಿ
ಸಾಮಾನ್ಯ ಜನರಂತೆ ಇದರ ರೀತಿ,
ನೀರೆರೆಯದಿದ್ದರೂ ಇಲ್ಲ ಭೀತಿ"—

ವರ್ಷದಲ್ಲಿ ಹನ್ನೆರಡು ತಿಂಗಳೂ ಬಿರಿದಿದ್ದರೂ ಈ ಹೂವಿಗೆ ಯಾವ ಬಿರುದಿಲ್ಲ; ಈ ನಿರಾಡಂಬರ-ಕರ್ತವ್ಯನಿರತ ದಾಸಾಳದೊಳಗುಂಟು ತನ್ನ ಜೀವದ ಗುಟ್ಟು. ದಾಸಾಳವೇ ನನ್ನ ಜೀವನದ ರೀತಿ ಎಂದು ಕವಿ ದಿನಕರರು ಹೃದಯ ತುಂಬಿ ಹಾಡಿದ್ದಾರೆ.

ಇವೆಲ್ಲ, ಅವರ ಅಂತರಾತ್ಮದ ತುಡಿತ-ಮಿಡಿತಗಳು ಯಾರ ಬಗ್ಗೆ, ಯಾಕಾಗಿ ಎಂಬ ಮೂಲಭೂತ ಪ್ರಶ್ನೆಗಳಿಗೆ ಉತ್ತರ ದೊರಕಿಸಬಲ್ಲ ಹಾಡುಗಳು.

## ೧೯. ಕನ್ನಡದ ಮೊದಲ ಬಂಡಾಯ ಕವಿ

'ಹಾಳಾಗಲಿ ಮನೆ ಮಠ ಹೊಲವೆಲ್ಲ
ಹಾಳಾಗಲಿ ಆ ಜೋಳವು ಬೆಲ್ಲ
ದಾಸ್ಯದಿ ಬೆಳೆದ ಬೆಳೆ ನಮದಲ್ಲ
ಸ್ವರಾಜ್ಯ ತಾಯಿ ಭಾರತ ಭೂ'—

೧೯೩೧ರಷ್ಟು ಹಿಂದೆ ಬಾರ್ಡೋಲಿಯ ಸತ್ಯಾಗ್ರಹಕ್ಕೆ ಸ್ಪಂದಿಸಿದ ದಿನಕರ ದೇಸಾಯಿ ಗುಡುಗಿದ ರೀತಿಯಿದು.

'ಬಿರುಗಾಳಿಯೇ ಬೇಕು ನಮ್ಮ ಉದ್ಧಾರಕ್ಕೆ
ಪೊಳ್ಳುಮರಗಳನೆಲ್ಲ ಭೂಮಿಗುರುಳಿಸಲಿಕ್ಕೆ'—

ಎನ್ನುವಲ್ಲಿ, ಅಂತಃಸತ್ವವಿಲ್ಲದಿದ್ದರೂ ಕೇವಲ ಬಾಹ್ಯಾಡಂಬರ-ದಿಂದ 'ದೊಡ್ಡವರು' ಎನ್ನಿಸಿಕೊಂಡ ಪೊಳ್ಳುಮರಗಳನ್ನು ನೆಲಸಮ ಮಾಡಬಲ್ಲ ವಿಚಾರಕ್ರಾಂತಿಯ ಬಿರುಗಾಳಿಯು ಅವಶ್ಯ ಕತೆ ಇದೆ ಎಂದು ಸಾರುವ ಕವಿಯ ಎದೆಗಾರಿಕೆಯನ್ನು ಕಾಣುತ್ತಿರುವಂತೆಯೇ, ನಮ್ಮ ಪೊಳ್ಳು ಸಂಪ್ರದಾಯಗಳನ್ನು, ಬಣ್ಣದ ಬದುಕನ್ನು, ಮೂಢನಂಬಿಕೆಗಳನ್ನು ಝಾಡಿಸಿಹಾಕಲು ಹೊಸಹುಮ್ಮಸ್ಸಿನ ಬಿಸಿರಕ್ತದ ಯುವಶಕ್ತಿಯ ಅವಶ್ಯಕತೆಯಿದೆ ಎಂದು ನೀಡಿದ ಆಹ್ವಾನವನ್ನೂ ಗುರುತಿಸಬಹುದಾಗಿದೆ.

ದಿನಕರರ 'ಕಲ್ಲುಕುಟಿಕರು' ಎಂಬ ಕವನದಲ್ಲಿ ಬರುವ ಈ ಮಾತುಗಳನ್ನು ಗಮನಿಸಿ:

"ನಮ್ಮ ಕಾಯುವನಾರು ? ಕೇಳು ಅಂದೆ:
ನಮಗೆ ನಾವೇ ಇನ್ನು ಮುಂದೆ, ತಂದೆ
ನಮ್ಮದೇ ಒಕ್ಕಟ್ಟು
ದೇವರಿಗೂ ಬಿಕ್ಕಟ್ಟು!
ಪೃಥಿವಿ ಗೋಲಿನ ಕಲ್ಲ ಗುಂಡ ಕುಟ್ಟಿ
ಮನೆಯ ಕಟ್ಟಲು ಹೊಟ್ಟೆ ತುಂಬ ರೊಟ್ಟಿ!"—

"ನಮಗೆ ನಾವೇ ಇನ್ನು ಮುಂದೆ, ತಂದೆ" ಎನ್ನುವ ಮಾತಿನ ಹಿಂದೆ ಕಾಣುವ ಅರ್ಥವ್ಯಾಪ್ತಿಯನ್ನು ಗುರುತಿಸಬೇಕು. ಇದು-ವರೆಗೆ ನಮ್ಮ ಕಾಯುವವರಂತೆ ನಟಿಸಿದ ದಣಿಗಳೆಲ್ಲರೂ ನಮ್ಮ

ಬೆವರಿನ ಅನ್ನವುಂಡು, ನಮ್ಮ ಶ್ರಮದ ಫಲವನ್ನು ಕಸಿದು, ನಮ್ಮ ಶೋಷಣೆಯ ಬಂಡವಾಳಿನಿಂದ ದೊಡ್ಡವರಾದರು. ಇನ್ನು ನಮ್ಮನ್ನು ಅವರು ಕಾಯುತ್ತಾರೆ ಎಂಬುದು ಸುಳ್ಳು. ನಮ್ಮ ಒಕ್ಕಟ್ಟು ಮಾತ್ರವೇ ನಮ್ಮನ್ನು ಕಾಯಬೇಕು. ಅದನ್ನು ಮುರಿಯುವುದು ದೇವರಿಂದಲೂ ಸಾಧ್ಯವಿಲ್ಲ. ನಮ್ಮ ರೊಟ್ಟಿ–ಯಿರುವುದು 'ಜೀಯಾ', 'ಹಸಾದ' ಎನ್ನುವುದರಲ್ಲಲ್ಲ. 'ಪೃಥಿವಿ ಗೋಲಿನ ಕಲ್ಲ ಗುಂಡ ಕುಟ್ಟಿ ಮನೆಯ ಕಟ್ಟುವುದರಿಂದಲೇ ಹೊಟ್ಟೆ ತುಂಬ ರೊಟ್ಟಿ!' ಆ ಶಕ್ತಿಯಿರುವ ಕಲ್ಲುಕುಟಿಕನಿಗೆ ಇನ್ನೊಬ್ಬನ ಹಂಗಿಲ್ಲ. ದೇವರಿಗೂ ಆತ Care ಮಾಡಬೇಕಾದ ಅಗತ್ಯವಿಲ್ಲ.

ಈ ಬಗೆಯ ಸಾತ್ವಿಕ ಬಂಡಾಯದ ಧ್ವನಿ ದೇಸಾಯರು ಬರೆದ 'ದೇವ ನೀನು ಸತ್ತರೇನು' ಎಂಬ ಕವನದಲ್ಲೂ ಇದೆ. ಲೋಕದಲ್ಲಿ ಬಹಳಷ್ಟು ಅನರ್ಥ ಪರಂಪರೆಗಳು ಬಿಡದೆ ನಡೆಯುತ್ತಿರುವಾಗ,

'ದೇವ ನೀನು ಸತ್ತರೇನು ?
ಮತ್ತೆ ನಾವು ಅತ್ತರೇನು ?
ಲೋಕದಲ್ಲಿ ಬಲು ಅನರ್ಥ
ನೀನು ಬದುಕಿದರೂ ವ್ಯರ್ಥ'—

ಎನ್ನುವುದಕ್ಕೆ ಕವಿಗೆ ಯಾವ ಭಿಡೆಯೂ ಇಲ್ಲ. ಜಗದ್ರಕ್ಷಕನೆನ್ನುವವನಿಂದ ಜನತೆಯ ಯೋಗಕ್ಷೇಮ ಸಾಧ್ಯವಾಗದಿದ್ದಾಗ ಆತ ಸಾಯುವುದೇ ಲೇಸು. ದೇವರ ರಾಜ್ಯದಲ್ಲಿ ಕೊಳಕು ತಿಂದು

ಬದುಕುವ ಹದ್ದಿನಂಥ ಜನರು ಎಷ್ಟು ಬೇಕು ? ಅಂಥವರನ್ನು ದಂಡಿಸದಿದ್ದ ದೇವರಿಲ್ಲದಿದ್ದರೇನು ಕುತ್ತು ? ಹೊಟ್ಟೆಗಿಲ್ಲದೆ ಸತ್ತವರ ಬಗ್ಗೆ ಕಣ್ತೆರೆದು ನೋಡದ ದೇವರ ಹಂಗು ಈ ಜನತಾಕವಿಗಿಲ್ಲ. ಇದೇ ಪ್ರಶ್ನೆಯನ್ನು 'ಎಲ್ಲಿ ಹೋಗಲಿ ನಾನು?' ಎನ್ನುವ ಪದ್ಯದಲ್ಲಿ ಮುಂದುವರಿಸಿದ ಕವಿ, ದೇವರ ಹೆಸರಿನಲ್ಲಿ ಲಂಚ, ಸೂಳೆಗಾರಿಕೆ, ಕೋಳಿ-ಕುರಿಗಳ ಬಲಿ ನಡೆಸುವವರೇ ಭಕ್ತರೆಂದಾದರೆ ನಾನು ಅಂಥ ಭಕ್ತ ಎನ್ನಿಸಿಕೊಳ್ಳಲಾರೆ ಎನ್ನುತ್ತಾನೆ.

ರೈತರ ಕೂಟ ಕಟ್ಟಿ, ಶೋಷಣೆಯ ಪ್ರತೀಕವಾಗಿದ್ದ ಒಡೆಯರನ್ನು ಘಟ್ಟ ಹತ್ತಿಸಲು ಅಹೋರಾತ್ರಿ ಪರಿಶ್ರಮಿಸಿದ ದಿನಕರ ದೇಸಾಯಿ ಅರ್ಧಶತಮಾನದಷ್ಟು ಹಿಂದೆ,

'ಯಾರಪ್ಪನ ಯಾರವ್ವಿಯ ಇಚ್ಛೆ
ಉತ್ತರ ಕನ್ನಡ ಜಿಲ್ಲೆಯ ಕಚ್ಚೆ?' ಎಂದು ಬರೆದಿದ್ದರು.

ಉತ್ತರ ಕನ್ನಡ ಜಿಲ್ಲೆಯ ವೀರ ಒಕ್ಕಲಿಗರು ತಮಗಾಗುತ್ತಿರುವ ಅನ್ಯಾಯದ ಪ್ರತಿಭಟನಾರ್ಥವಾಗಿ ನಾಡಿನ ದುಷ್ಟ ಸಂತಾನಕ್ಕೆ ಆ ಕಾಲದಲ್ಲಿ ಒಡ್ಡಿದ ಅಸಾಧಾರಣ ಪಂಥಾಹ್ವಾನ ಅದು. ಉತ್ತರ ಕನ್ನಡ ಜಿಲ್ಲೆಯ ಕಚ್ಚೆಯ ಭವಿಷತ್ತನ್ನು ರೂಪಿಸುವುದಕ್ಕೆ ಯಾವ ಬಾಜೀರಾಯ ಅಪ್ಪ-ಅವ್ವಿಯ ಇಚ್ಛಾ ಮರ್ಜಿಯ ಅವಶ್ಯಕತೆಯೂ ಬೇಕಾಗಿಲ್ಲ. ಅವರಿಗೆ ಅವರೇ ದಣಿಗಳು. ಕೆಂಪು ಬಾವುಟದ ಅಡಿಯಲ್ಲಿ ನಿಂತು ಉತ್ತರ ಕನ್ನಡದಲ್ಲಿ ಜನಶಕ್ತಿಯ ಬೆಳೆ ತೆಗೆಯಲು ಹೊರಟ ದಿನಕರರು

ಹಾಡಿದ ಈ ಕ್ರಾಂತಿಕವನಕ್ಕೆ ಇರುವ ಚಾರಿತ್ರಿಕವಾದ ಮಹತ್ವ ವನ್ನು ಉಪೇಕ್ಷಿಸಲಾಗದು.

ಹೀಗೆ, ಇಷ್ಟು ಸ್ಪಷ್ಟವಾಗಿ, ಯಾವ ಹೆಂಗೂ ಇಲ್ಲದೆ ಈ ಶತಮಾನದ ಆದಿಭಾಗದಲ್ಲೇ-ದುಷ್ಟಶಕ್ತಿಗಳ ವಿರುದ್ಧ, ದುರ್ನೀತಿಗಳ ವಿರುದ್ಧ ಸಮರ ಸಾರಿದ ಇನ್ನೊಬ್ಬ ಕವಿ ಕನ್ನಡ ದಲ್ಲಿ ಸಿಗುತ್ತಾನೆಯೇ ?...

## ೨೦. ಮಕ್ಕಳ ಕವಿಯಾಗಿ

ಕನ್ನಡದ ಕೆಲವೇ ಕೆಲವು ಸಮರ್ಥ ಮಕ್ಕಳ ಕವಿಗಳಲ್ಲಿ ದೇಸಾಯರದು ಎದ್ದುಕಾಣುವ ಹೆಸರು. ಇವರ ಪ್ರಥಮ ಸಂಕಲನ 'ಕವನ ಸಂಗ್ರಹ'ದಲ್ಲಿಯೇ 'ಗಡಿಯಾರ', 'ವಾರದ ಪದ', 'ಕಳ್ಳಾಮಳ್ಳ', 'ಗೋವಿಂದ'ದಂತಹ ಮಕ್ಕಳಹಾಡು-ಗಳು ಸಿಗುತ್ತವೆಯಾದರೂ ಮುಂದೆ ಕೆಲವರ್ಷಗಳಲ್ಲಿ 'ಮಕ್ಕಳ ಗೀತಗಳು' 'ಮಕ್ಕಳ ಪದಗಳು' ಎಂಬ ಮಕ್ಕಳಿಗಾಗಿಯೇ ಮೀಸಲಾದ ಎರಡು ಸಂಕಲನಗಳನ್ನು ಹೊರತಂದರು. ('ಕವನ ಸಂಗ್ರಹ' ದಂತೆಯೇ 'ಮಕ್ಕಳ ಗೀತಗಳು' ಸಂಕಲನಕ್ಕೂ ಅಂದಿನ ಮುಂಬಯಿ ಸರಕಾರದ ಪ್ರಥಮ ಬಹುಮಾನ ದೊರ-ಕಿತ್ತು). ಇವರು ಬರೆದ 'ತಿಪ್ಪಾಭಟ್ಟರ ಹಾಡುಗಳು' ಮತ್ತು 'ಪೆಕ್ಕನ ಪದಗಳು' ಇಂದು ಕನ್ನಡನಾಡಿನ ಬಹುತೇಕ ಪುಟಾಣಿ ಮಕ್ಕಳ ನಾಲಿಗೆಯಲ್ಲಿ ಜೀವಂತವಾಗಿವೆ. ಮಕ್ಕಳ ಮನಸ್ಸನು ಅವರ ವಯೋಮಾನಕ್ಕೆ ಮತ್ತು ಅವರ ಮನೋಮಾನಕ್ಕೆ ಇಳಿದು ಅರ್ಥಮಾಡಿಕೊಂಡು ಬರೆದ ಕವಿಗಳು ಕನ್ನಡದ ಮಟ್ಟಿಗಂತೂ

ಬಹಳಷ್ಟು ಜನ ಸಿಗುವುದಿಲ್ಲ. ಕುವೆಂಪು ಅವರ 'ಕಿಂದರಜೋಗಿ' ಸಂಕಲನದೊಳಗಿನ ಅನೇಕ ಉತ್ತಮ ಕವನಗಳಿಗಿಂತಲೂ ದೇಸಾಯರ ಶಿಶುಗೀತಗಳು ಮಕ್ಕಳಿಗೆ ಆತ್ಮೀಯವಾಗಿವೆ.

'ಬೆಕ್ಕೆ ಬೆಕ್ಕೆ ಮುದ್ದಿನ ಸೊಕ್ಕೆ
ಎಲ್ಲಿಗೆ ಹೋಗಿದ್ದೆ ?'

ಎಂಬ ಪ್ರಶ್ನೆಗೆ,

'ಕೇಳೊ ಕಳ್ಳಾ ಮುದ್ದಿನ ಮಳ್ಳಾ
ಮೈಸೂರ್ ಅರಮನೆಗೆ'-

ಎಂಬ ಉತ್ತರವೂ ದೊರಕಿ, ಮಕ್ಕಳು ಬಾಲಸಹಜ ನಾಟಕೀಯ ಸುಖವನ್ನು ಅನುಭವಿಸುವಂತಾಗುತ್ತದೆ. ದಿನಕರರ 'ತಿಪ್ಪಾ ಭಟ್ಟ' ರಂತೂ ಎಂದೂ ಮರೆತು ಹೋಗುವ ಆಸಾಮಿಯಲ್ಲ.

'ತಿಪ್ಪಾಭಟ್ಟರ ಡೊಳ್ಳು
ನೋಡಲು ಮಕ್ಕಳುಮಳ್ಳು
ಕುಂಬಳಕಾಯಿಯ ಹಾಗೆ
ಉರುಟುರುಟಾಗಿದೆ ಹೀಗೆ'

ಒಂದು ವ್ಯಕ್ತಿತ್ವದ ಇಡಿಯಾದ ಚಿತ್ರಣ ನಾಲ್ಕು ಸಾಲುಗಳಲ್ಲಿ ಸೆರೆಹಿಡಿದು ದೇಸಾಯರು ಮಕ್ಕಳಿಗೆ ಸಂತೋಷ ಕೊಡುವ ರೀತಿ ಇದು.

'ತಿಪ್ಪಾಭಟ್ಟರ ಜುಟ್ಟು
ತಲೆಯಲಿ ಎಲ್ಲಿಯು ಮುಟ್ಟು

ತಿಪ್ಪಾ ಭಟ್ಟರ ಮೂಗು
ಹಗರಣದೊಳಗಿನ ಸೋಗು'–

ಇಂಥ ಪ್ರಾಸಬದ್ಧ, ಸರಳ, ಹಾಸ್ಯಭರಿತ ನುಡಿಗಟ್ಟುಗಳಿಂದ ದೇಸಾಯರು ಮಕ್ಕಳಿಗೆ ಹುಚ್ಚೆಬ್ಬಿಸುತ್ತಾರೆ. ಸರಳವಾದ ಮಾರ್ಗದಲ್ಲೇ ಕಥನ-ಕವನ ಕಟ್ಟಿ, ಆ ಮೂಲಕ ಮಕ್ಕಳಲ್ಲಿ ಜಾಣ್ಮೆಯನ್ನೂ ನೀತಿಯನ್ನೂ ತುಂಬುವುದು ದೇಸಾಯಿ ಶಿಶು ಗೀತೆಗಳಲ್ಲಿ ಕಾಣುವ ಇನ್ನೂ ಒಂದು ವೈಶಿಷ್ಟ್ಯ. ಇದಕ್ಕೆ ನಿದರ್ಶನವಾಗಿ ಅವರ 'ರೈತ ಮತ್ತು ಕರಡಿ' ಹಾಡನ್ನೂ ನೋಡಬಹುದು.

ಅದೇರೀತಿ ವಾರದ ಪದಗಳೂ ಲೆಕ್ಕದ ಪದಗಳೂ ಕೂಡ ಮಕ್ಕಳಿಗೆ ಮನರಂಜನೆ ನೀಡುವುದರ ಜತೆಗೆ ಜ್ಞಾನವೃದ್ಧಿಗೂ ಸಹಕಾರಿಯಾಗಿವೆ. ಹಾಲುಹಲ್ಲಿನ ಮಕ್ಕಳಿಗೆ ಸಂತೋಷದ ಜೊತೆಗೇ ಸ್ಮರಣಶಕ್ತಿಯನ್ನು ಹೆಚ್ಚಿಸುವುದು, ಆಲೋಚನೆ ಯನ್ನು ಹುರಿಗೊಳಿಸುವುದು, ಕುತೂಹಲವನ್ನು ಕೆರಳಿಸುವುದು ದಿನಕರ ದೇಸಾಯರ ಶಿಶುಗೀತೆಗಳಲ್ಲಿ ನಾವು ಕಾಣುವ ವೈಶಿಷ್ಟ್ಯ ಗಳು.

## ೨೧. ಅಭಿನವ ಸರ್ವಜ್ಞ

ಇಷ್ಟೊಂದು ವೈವಿಧ್ಯಮಯ, ವೈಶಿಷ್ಟ್ಯಮಯ ಭಾವ- ಗೀತೆಗಳನ್ನೂ ಶಿಶುಗೀತಗಳನ್ನೂ ಬರೆದು ವಿದ್ವತ್ ಪ್ರಪಂಚದ

ಆದರಕ್ಕೆ ಪಾತ್ರರಾದ ದಿನಕರ ದೇಸಾಯಿ ಕನ್ನಡಿಗರ ಮನೆ ಮಾತಾದುದು 'ಚುಟುಕ ಕವಿ' ಎಂದು. ಅವರ 'ಭತ್ತದ ತೆನೆ' ಯಿಂದ ರಾಶಿರಾಶಿಯಾಗಿ ಹೊರ ಬಿದ್ದ ಚೌಪದಿಯ ಕಾಳುಗಳ ಪ್ರಭಾವ ಎಷ್ಟಾಗಿತ್ತೆಂದರೆ, ಅವರ ಹಿಂದಿನ ಜನಪ್ರಿಯ ಗೀತ-ಗಳನ್ನೆಲ್ಲ ಹೊಸ ತಲೆಮಾರಿನ ಓದುಗ ಮರೆತು-ಚುಟಕಗಳ ಮೋಡಿಗೇ ವಶನಾಗಿ ಬಿಟ್ಟಿದ್ದಾನೆ. ತಾವು ಬರೆದ ಚೌಪದಿಗಳ ಸಂಖ್ಯೆ ಸುಮಾರು ಹನ್ನೊಂದು ಸಾವಿರದಷ್ಟಾಗಬಹುದೆಂದು ಒಮ್ಮೆ ಅವರೇ ನನ್ನಲ್ಲಿ ಹೇಳಿದ್ದುಂಟು. ಭಾವಗೀತಗಳಿಂದ ಚುಟಕಗಳ ಕಡೆ ತಮ್ಮ ಗಮನ ಹರಿದ ಕಾರಣವನ್ನೂ ಅವರು ಹೇಳಿದ್ದಾರೆ:

"ಚುಟುಕ ನನ್ನ ಸ್ವಭಾವಕ್ಕೆ ಒಗ್ಗುತ್ತದೆ. ನನಗೆ ತಾಳ್ಮೆ ಕಡಿಮೆ. ಒಂದು ವಿಷಯದ ಬಗ್ಗೆ ಹೆಚ್ಚು ಕಾಲ ಯೋಚಿಸುವುದು ನನಗೆ ಸೇರುವುದಿಲ್ಲ. ಅನ್ಯಾಯವನ್ನು ಹೆಚ್ಚು ಹೊತ್ತಿನವರೆಗೆ ಸಹಿಸುವುದಕ್ಕೂ ನನ್ನಿಂದ ಸಾಧ್ಯವಿಲ್ಲ. ಅನಿಸಿದ್ದನ್ನು ಸ್ವಲ್ಪ ದರಲ್ಲಿ—ಆ ಕ್ಷಣವೇ ಹೇಳಿ ಬಿಡಬೇಕು. ಆಗ ನನಗೆ ತೃಪ್ತಿ. ಹೀಗಾಗಿ ನನಗೆ ಹೇಳಬೇಕೆನಿಸಿದ್ದನ್ನೆಲ್ಲ ಚುಟಕದಲ್ಲಿ ಹೇಳಲು ಪ್ರಾರಂಭಿಸಿದೆ."

ಎರಡನೆಯದಾಗಿ, ಇವರ ಕಾವ್ಯದಲ್ಲಿ ವಿಡಂಬನೆ ಹೆಚ್ಚು. ವಿಡಂಬನೆಗೆ ಚುಟಕ ಮಾಧ್ಯಮವೇ ಹೆಚ್ಚು ಸೂಕ್ತ ಎಂಬುದು ದೇಸಾಯರ ಅಭಿಪ್ರಾಯ. ಈ ವಿಷಯದಲ್ಲಿ ಸರ್ವಜ್ಞ ಕವಿಯ ತ್ರಿಪದಿಗಳು ತಮಗೆ ಮಾರ್ಗದರ್ಶಿ ಎಂದವರು ಹೇಳಿಕೊಂಡ-ದ್ದುಂಟು. ಉದಾಹರಣೆಗೆ ಈ ಚೌಪದಿಯನ್ನು ನೋಡಿ :

"ಸರ್ವಜ್ಞ ಕವಿ ನೀನು ಮೂಡಿಸಿದ ತ್ರಿಪದಿ
ನನ್ನ ಚೌಪದಿಗಳಿಗೆ ತೋರಿಸಿತು ಹಾದಿ
ನಿನ್ನ ಮಾತಿನ ಸೊಗಸು ಬರಲಿಲ್ಲ ನನಗೆ
ನೀನೊಬ್ಬನೇ ಸಾರ್ವಭೌಮ ಇದುವರೆಗೆ"

('ಸರ್ವಜ್ಞನಿಗೆ')

ಡಿ. ವಿ. ಜಿ. ಯವರ 'ಮಂಕುತಿಮ್ಮನ ಕಗ್ಗ,' ಬ್ಲೇಕ್‌ಕವಿಯ ಹಾಡುಗಳೂ ತಮ್ಮ ಮೇಲೆ ಸಾಕಷ್ಟು ಪ್ರಭಾವ ಬೀರಿವೆ ಎಂದೂ ದೇಸಾಯಿ ಹೇಳುತ್ತಿದ್ದರು.

ಹರಿತವಾದ ವಿಡಂಬನೆ ದೇಸಾಯಿ ಚೌಪದಿಯ ಪ್ರಮುಖ ಲಕ್ಷಣ. ಸಮಾಜದಲ್ಲಿ ನಡೆಯುವ ನೂರೆಂಟು ಹಗರಣಗಳೇ ಇವರ ಚುಟುಕಗಳ ಆಕರ ಸಾಮಗ್ರಿ. ದೇಸಾಯರ ಕಟಕಿಗೆ ಇಲ್ಲೊಂದೆರಡು ಸ್ಯಾಂಪಲ್ಲುಗಳು:

ಗೋವಿಂದ 'ಗೋಪಾಲ ಕೇಳೊ ಮುರಾರಿ
ನೈವೇದ್ಯ ಸ್ವೀಕರಿಸಿ ಆದರು ಪರಾರಿ
ಲೆಕ್ಕಪತ್ರಗಳಿಲ್ಲ ಕರುಣಿಸು ಮುಕುಂದ
ಖಾದಿ ಬೋರ್ಡಿನ ಹಣೆಗೆ ಹಚ್ಚಿದರು ಗಂಧ'

('ಖಾದಿ ಬೋರ್ಡ್')

'ಕೈಕಾಲು ಸಣ್ಣಾಗಿ ಹೊಟ್ಟೆಯೋ ದೊಡ್ಡ
ಮೈಯೆಲ್ಲ ಕೊಳೆಯಾಗಿ ನಾರುತಿದೆ ಗಡ್ಡ.
ಇದರ ಪರಿಚಯ ನಿನಗೆ ಉಂಟೇನು ಪೋರಾ ?
ಹೌದು, ಈ ಪ್ರಾಣಿಯೋ ನಮ್ಮ ಸರಕಾರ'

('ಪೋರನ ಉತ್ತರ')

ಇವನ್ನೆಲ್ಲ ಕೇವಲ ಪ್ರಾಸಬದ್ಧ ತುಣುಕುಗಳೆಂತೀರೇನು ?...
ಖಾದಿ ಬೋರ್ಡಿನ ದಿವಾಳಿ ಕರ್ಮಕಥೆಯನ್ನು ಕಂಡರಿಸುವ ಚೌಪದಿ 'ಗೋವಿಂದ' ಶಬ್ದದಿಂದಲೇ ಆರಂಭವಾಗುತ್ತಿರುವುದೇ ಅರ್ಥಪೂರ್ಣ. 'ನೈವೇದ್ಯ', 'ಗಂಧ' ಇತ್ಯಾದಿ ಪದಗಳ ಬಳಕೆ ಎಷ್ಟೊಂದು ಸಾಂಕೇತಿಕ! ಅಂತೇ, ಭ್ರಷ್ಟಾಚಾರದಿಂದ, (ನುಂಗಪ್ಪರಿಂದ) ನಾರುತ್ತಿರುವ ಭ್ರಷ್ಟ ಸರಕಾರವೊಂದನ್ನು ಕೈಕಾಲು ಸಣ್ಣಾಗಿ ಹೊಟ್ಟೆಯೇ ದೊಡ್ಡದಾಗಿರುವ ಒಂದು 'ಪ್ರಾಣಿ'ಗೆ ಹೋಲಿಸುವ ಮೂಲಕ ಕವಿ ಇಲ್ಲಿ ಎಂಥ ಅದ್ಭುತ-ವಾದ ಪ್ರತಿಮಾವಿಧಾನ ಮೆರೆದಿದ್ದಾನೆಂಬುದನ್ನು ಗಮನಿಸ-ಬೇಕಾಗುತ್ತದೆ.

ದಿನಕರರ ಚೌಪದಿಗಳು ಸಾಹಿತ್ಯ ಸತ್ವದಿಂದ ಹೇಗೆ ಕಂಗೊಳಿಸುತ್ತವೆ ಎಂಬುದಕ್ಕೆ ಇನ್ನೊಂದೆರಡಾದರೂ ಚುಟುಕ-ಗಳನ್ನು ಉದಾಹರಿಸಲೇಬೇಕು:

'ಇರುಳಬ್ಬೆ ಬೆಸಲಾಗೆ ಕೂಸು ಮುಂಜಾವು
ಮುಗುಳುನಗೆ ಬೀರಿ ಸತ್ಕರಿಸಿದವು ಹೂವು
ಗಿಡಬಳ್ಳಿಗಳು ಹಾಡಿದವು ಮಧುರ ಕವನ
ಬಾಲರವಿ ಹಣಹಣಕಿ ನೋಡಿದನು ಜನನ'—

('ಜನನ')

ಎಂಥ ಸುಂದರ ರೂಪಕ!.. ಮುಂಜಾವೆಂಬ ಕೂಸಿಗೆ ಸ್ವಾಗತಿ-ಸುವ ವಾತಾವರಣವನ್ನು ಕವಿ ನಾಲ್ಕು ಪಂಕ್ತಿಗಳಲ್ಲಿ ಸೃಷ್ಟಿಸಿದ ರೀತಿಯೇ ಅಸಾಧಾರಣವಾದುದಾಗಿದೆ.

'ತ್ರಿಭುವನಕೆ ದಾರಿ ತೋರಿಸಿದೆ, ಬಾಪೂಜಿ
ನಿನ್ನ ಕೈಯೊಳಗಿತ್ತು ಕಾಂಚನದ ಸೂಜಿ,
ಚಿಂದಿಯಾದರು ಪೃಥಿವಿ ಹೋರಾಟದಿಂದೆ,
ಅದನು ಹೊಲಿಯುವ ಶಕ್ತಿ ನಿನಗಿತ್ತು, ತಂದೆ'—
('ಬಾಪೂಜಿಗೆ')

"ಒಬ್ಬ ಸಾಮಾನ್ಯ ಮೋಹನದಾಸ ಗಾಂಧಿ, ಮಹಾತ್ಮಾ ಗಾಂಧಿಯಾದುದರ ಹಿಂದೆ ಇರುವ ಅಸಾಧಾರಣ ಪ್ರತಿಭೆ-ಯೆಂಥದ್ದು, ಆ ವ್ಯಕ್ತಿತ್ವದಲ್ಲಿ ಎಂಥ ಸಮ್ಮೋಹಕ ಶಕ್ತಿ ಅಡ-ಗಿತ್ತು ಎಂಬುದನ್ನೆಲ್ಲ ಈ ಕಿರುಗವನದಲ್ಲಿ ತೋರಿಸಿದ್ದಾರೆ ದಿನಕರ ದೇಸಾಯಿ.

'ಆಡು ಮುಟ್ಟದ ಗಿಡವಿಲ್ಲ; ಸರ್ವಜ್ಞಕವಿ ಸ್ಪರ್ಶಿಸದೆ ಬಿಟ್ಟ ವಿಷಯವಿಲ್ಲ' ಎಂಬ ಮಾತನ್ನು ಅಭಿನವ ಸರ್ವಜ್ಞ ಖ್ಯಾತಿಯ ದಿನಕರ ದೇಸಾಯರಿಗೂ ಅನ್ವಯಿಸಿ ಹೇಳಬೇಕಾ ಗುತ್ತದೆ. ಅವರ ಚುಟುಕಗಳಲ್ಲಿ ಎರಡು ಜಾತಿ. ಒಂದು "ಭೂಬಾಣ'ದ್ದಾದರೆ ಇನ್ನೊಂದು 'ಹೂಬಾಣ'ದ್ದು. ಕೆಟ್ಟದ್ದು ಕಂಡಲ್ಲಿ ಅವು ಮಾರಿಯಂತೆ ಬೆನ್ನಟ್ಟಿದರೆ, ಒಳಿತು ಇದ್ದಲ್ಲಿ ಅವು ಒಲಿದು ಬರುವ ಪ್ರಣಯಿನಿಯರಂತೆ ಹಾಡಿ ಹೊಗಳಿ ಹರಸು ತ್ತವೆ. ಪ್ರತಿಯೊಂದು ಕ್ಷೇತ್ರದೊಳಗೂ ಈ ಎರಡೂ ಜಾತಿಯ ಚುಟುಕಗಳನ್ನು ನಾವು ಕಾಣುತ್ತೇವೆ.

ಎಲ್ಲ ಕ್ಷೇತ್ರದ, ಎಲ್ಲ ಬಗೆಯ ಜೀವನಾನುಭವವನ್ನು ತಮ್ಮ ಕಾವ್ಯ ಕಾರ್ಖಾನೆಗೆ ಕಚ್ಚಾ ಸಾಮಗ್ರಿಯಾಗಿ ಬಳಸಿ

ಕೊಂಡು, ಆ ಮೂಲಕ ಬಗೆ ಬಗೆಯ ಚೌಪದಿಯ ಸರಕುಗಳನ್ನು ಹೊರಹಾಕಿ 'ಈತನಿಗೆ ಇನ್ನೊಬ್ಬ ಸರಿಸಾಟಿಯಿಲ್ಲ' ಎಂಬ ಪ್ರಮಾಣದಲ್ಲಿ ತಮ್ಮದೇ ಆದ ಒಂದು ಕಾವ್ಯಪಂಥವನ್ನು ನಿರ್ಮಿಸಿದ್ದು ದೇಸಾಯಿಯವರ ಹೆಗ್ಗಳಿಕೆ ಹಾಗೂ ಈ ಶತಮಾನದಲ್ಲಿ ಕನ್ನಡ ಕಾವ್ಯ ಪ್ರಪಂಚ ಕಂಡುಕೊಂಡ ಒಂದು ಗಮನಾರ್ಹ ಬೆಳವಣಿಗೆ. ದಿನಕರರ ನಂತರವೂ ಅವರ ಪ್ರಭಾವದಿಂದ ಕನ್ನಡದಲ್ಲಿ-ವಿಶೇಷವಾಗಿ ಉತ್ತರ ಕರ್ನಾಟಕ ಭಾಗದಲ್ಲಿ-ಚುಟುಕು ಕವಿಗಳ ಒಂದು ಪಂಥವೇ ನಿರ್ಮಾಣವಾಗಿರುವುದು ಈ ಮಾತನ್ನು ಪುಷ್ಟೀಕರಿಸುವ ಅಂಶವಾಗಿದೆ.

ದಿನಕರರ ಚೌಪದಿಗಳ ಇನ್ನೊಂದು ದೊಡ್ಡ ಗುಣವೆಂದರೆ ಶಬ್ದಗಳ ಬಳಕೆಯಲ್ಲಿ 'ಮಡಿವಂತಿಕೆ' ತಾರದಿರುವುದು. ಭಾವನೆಯನ್ನು ಚೊಪುಗೊಳಿಸುವಲ್ಲಿ ಸಹಕಾರಿಯಾಗುವ ಯಾವುದೇ ಭಾಷೆಯ ಪದಗಳನ್ನೂ ಅವರು ಸ್ವಾಗತಿಸಿದ್ದುಂಟು-ಪುಷ್ಕಳವಾಗಿ ಬಳಸಿದ್ದುಂಟು. ಹಿಂದಿ, ಇಂಗ್ಲಿಷ್, ಉರ್ದು, ಸಂಸ್ಕೃತ, ಕೊಂಕಣಿ-ಹೀಗೆ ಯಾವುದಾದರೂ ಸರಿಯೇ. ಯಾವ ಪದವನ್ನೇ ಬಳಸಿರಲಿ, ಅದು ಹಸಿ ಗೋಡೆಗೆ ಒಗೆದಾಗಿನ ಹರಳಿನಂತೆ ಯಾವ ಅಡಚಣೆಯೂ ಇಲ್ಲದೆ ಪದ್ಯಕ್ಕೆ ಪೂರಕವಾಗಿ ಹೊಂದಿಕೊಳ್ಳುತ್ತದೆ. ಕನ್ನಡ ಪದ ಪುಂಜಗಳನ್ನು ಎಲ್ಲೆಲ್ಲಿ ಹೇಗೆ ಹೇಗೆ ಬಳಸಬೇಕು, ಕುಣಿಸಬೇಕು ಎಂಬುದು ದೇಸಾಯಿಯವರಿಗೆ ನೀರುಕುಡಿದಷ್ಟು ಸುಲಭ.

## ೨೨. ವಾಸ್ತವವಾದಿ-ಮಾನವತಾವಾದಿ

ದಿನಕರ ದೇಸಾಯಿ ಸ್ವರ್ಗವನ್ನು ನಂಬಿದವರಲ್ಲ. ಇಹ ಲೋಕದಲ್ಲಿ ನಂಬಿಕೆಯಿದ್ದವರಿಗೆ ಸ್ವರ್ಗ ಬೇರೆ ಬೇಕಾಗಿಲ್ಲ ಎಂಬ ನಿಲುವು ಅವರದು, "ಸಗ್ಗವನೇರಲು ಬಯಸುವುದೇತಕೆ! ಅಂದ ಚೆಂದದ ಭೂಮಿಗೆ ಬಂದು ?' ಎಂದು ತಮ್ಮ ಹರೆಯದ ದಿನ ಗಳಲ್ಲೇ ಪ್ರಶ್ನಿಸಿದವರು ಅವರು. ಅವರ ದೃಷ್ಟಿಯಲ್ಲಿ ನಮ್ಮ ಗೋವುಗಳನ್ನು ಕಾಯುವ ಗೋವಳಿಗನೇ ಸ್ವರ್ಗಲೋಕದ ಗೋಪಾಲ. ಹಸಿರು ಮೆತ್ತನ್ನ ಹುಲ್ಲುರಾಶಿಯೇ ಸ್ವರ್ಗದ ಹಾಸಿಗೆ. ಆಕಾಶದ ನಕ್ಷತ್ರಗಳೇ ಸ್ವರ್ಗದ ಹೂಗಳು. ಕಲ್ಪನೆಯ ಸಾಮ್ರಾಜ್ಯಕ್ಕೂ ದೇಸಾಯರಿಗೂ ಗಾವುದ ಗಾವುದ ದೂರ. ನಿಜಸ್ಥಿತಿ, ಕಣ್ಣಿಗೆ ಕಾಣುವುದು ಮಾತ್ರ ಅವರಿಗೆ ಗ್ರಾಹ್ಯ.

ಬಾಹ್ಯಾಡಂಬರದ ಜೀವನವನ್ನು ಅವರೆಂದೂ ನಡೆಸಿಲ್ಲ. ಇನ್ನೊಬ್ಬರು ನಡೆಸಿದಾಗ ಕಾವ್ಯಬಾಣದಿಂದ ಖಂಡಿಸದೆ ಬಿಟ್ಟ-ವರೂ ಅಲ್ಲ. ದುಂದುವೆಚ್ಚ ಮಾಡುವವರನ್ನು ದೇಸಾಯಿ ಸಹಿಸರು. ಅನಿವಾರ್ಯವಿದ್ದಲ್ಲಿ ತಾವೇ ಹೋಗಿ ಕೊಟ್ಟು ಬಂದಾರು. ಸ್ವತಃ ತಮ್ಮ ಮದುವೆಗೆ ಅವರು ಮಾಡಿದ ಖರ್ಚು ಏಳು ರೂಪಾಯಿ. ರಜಿಸ್ಟ್ರೇಶನ್ನಿಗೆ ಎಷ್ಟು ಬೇಕೋ ಅಷ್ಟು ಮಾತ್ರ.

ತಮ್ಮ ಮಡದಿ 'ಇಂದಿರಾ'ಗೆ ಹೇಳಿಕೊಟ್ಟ ಮೊದಲ ಪಾಠವೂ ಅದೇ ಅಂತೆ: 'ಸಂಸಾರ ತೂಗಿಸಿಕೊಂಡು ಹೋಗಲು ಎಷ್ಟು ಬೇಕೊ ಅಷ್ಟನ್ನು ಮಾತ್ರ ಖರ್ಚು ಮಾಡು. ನಾನು

ಸಾರ್ವಜನಿಕ ಸೇವಕ. ನನಗೆ ಉತ್ಪನ್ನವಿಲ್ಲ. ಬಡತನದಲ್ಲಿ ಜೀವನ ನೀಗಬೇಕು. ಅದಕ್ಕೆ ನಿನ್ನ ಸಹಕಾರ ಬೇಕು'. ಇಂದಿರಾ ದೇಸಾಯಿ ಕೊನೆಯವರೆಗೂ ಅದನ್ನು ಪಾಲಿಸಿದರು.

ದೇಸಾಯಿ ತಾವು ಸಂಸತ್ ಸದಸ್ಯರಾಗಿದ್ದಾಗ ಬಂದ ಸಂಭಾವನೆಯನ್ನೂ ಕೂಡ ಸ್ವಂತಕ್ಕೆ ಬಳಸಲಿಲ್ಲ. ಅವರು ಕೋಟ್ಯಾವಧಿ ಆಸ್ತಿಯುಳ್ಳ ಕೆನರಾ ವೆಲ್‌ಫೇರ್ ಟ್ರಸ್ಟಿಗೆ ಅಧ್ಯಕ್ಷರಾಗಿದ್ದರು. ಅದು ಅವರದೇ ಶ್ರಮದಿಂದ ಬೆಳೆದು ನಿಂತ ಸಂಸ್ಥೆ. ಆದರೂ ತಮ್ಮ ಕಾಲಿನಲ್ಲಿ ತ್ರಾಣವಿರುವವರೆಗೂ ನಡೆದೇ ಕಚೇರಿಯಿಂದ ಮನೆಗೆ ಹೋಗುತ್ತಿದ್ದರು. ಸಂಸತ್ ಸದಸ್ಯರಾದ ಮೇಲೂ ಆರ್ಡಿನರಿ ಬಸ್ಸಿನಲ್ಲೇ ಸಂಚರಿಸುತ್ತಿದ್ದರು. ಅನಿವಾರ್ಯವಾದಾಗ ಮಾತ್ರ ಟ್ಯಾಕ್ಸಿ.

ದೇಸಾಯರಿಗೆ ಗಂಡು ಮಕ್ಕಳಿಲ್ಲ. ಮೊದಲು ಹುಟ್ಟಿದವೆರಡೂ ಹೆಣ್ಣು. ಯಾರ ಒತ್ತಡಕ್ಕೂ ಮಣಿಯದೆ ಮಿತ ಸಂತಾನ ವ್ಯವಸ್ಥೆಗೆ ಒಳಪಟ್ಟರು. ಗಂಡು ಹುಟ್ಟಿ ಸ್ವರ್ಗಕ್ಕೆ ಒಯ್ಯುತ್ತಾನೆಂಬುದರ ಬಗ್ಗೆ ಅವರು ಲೇವಡಿ ಮಾಡಿದ ಪ್ರಸಂಗಗಳೆಷ್ಟೋ!.... ತಾವು ಕಟ್ಟಿ ಬೆಳೆಸಿದ ಶಿಕ್ಷಣದ ಟ್ರಸ್ಟೇ ತನ್ನ ಗಂಡುಮಗ ಎಂದವರು ಒಂದು ಚುಟುಕದಲ್ಲಿ ಹೇಳಿಕೊಂಡದ್ದುಂಟು.

ಒಮ್ಮೆ ನನ್ನ ಊರಿನ ಒಂದು ಹುಲ್ಲಿನ ಮನೆಗೆ ಬೆಂಕಿ ಬಿದ್ದು ಬೂದಿಯಾಯಿತು. ಹಾಲಕ್ಕಿ ರೈತ ಮಹಿಳೆ (ವಿಧವೆ)ಯ ಮನೆ. ಇರುವ ಮಕ್ಕಳು ಚಿಕ್ಕವರು. ಆಗ ನಾನು ದೇಸಾಯರೇ

ಪ್ರೇರಣೆ ನೀಡಿ ಕಟ್ಟಿದ ಅಲ್ಲಿಯ ಯುವಕ ಸಂಘದ ಅಧ್ಯಕ್ಷ. ಸಂಘದ ಸದಸ್ಯರನ್ನು ಕೂಡಿಕೊಂಡು ಬೆಂಕಿ ಆರಿಸಲು ಮಾಡಿದ ಯತ್ನ ಫಲಿಸಲಿಲ್ಲ. ಮುಂಬಯಿಯಲ್ಲಿದ್ದ ದೇಸಾಯಿರಿಗೆ ನಡೆದ ಸಂಗತಿ ಬರೆದು ತಿಳಿಸಿದೆ. ಅಲ್ಲಿಂದ ಆರನೇ ದಿನಕ್ಕೆ ಉತ್ತರ ಬಂತು.

> "ಈ ಪತ್ರದೊಂದಿಗೆ ೫೦೦ರೂಪಾಯಿ ಕೊಡುವಂತೆ ನಮ್ಮ ಟ್ರಸ್ಟಿನ ಅಕೌಂಟಂಟ ಪೈ ಅವರಿಗೆ ಬರೆದ ಪತ್ರದ ನಕಲು ಇಟ್ಟಿದ್ದೇನೆ. ಮನೆ ಕಳೆದುಕೊಂಡ ಹೆಂಗಸಿನ ಕೈಗೆ ನಗದು (Cash) ಕೊಡಬೇಡ. ಖರ್ಚುಮಾಡಿ ಕೊಳ್ಳಬಹುದು. ಬಿತ್ತಿಗೆ ಹಂಗಾಮು ಬಂದಿದೆ. ನೀನೇ ಮುಂದಾಗಿ ಬೀಜ ಖರೀದಿ ಮಾಡಿ ಕೊಡು. ಮನೆ ರಿಪೇರಿಗೆ ಬಾಕಿಹಣ ಬಳಸು."

ಹಾಲಕ್ಕಿ ರಾಕುಗೌಡ ಸುಮಾರು ಮೂರುವರೆ ದಶಕಗಳಷ್ಟು ಕಾಲ ದಿನಕರ ದೇಸಾಯಿಯರ ರೈತ ಹೋರಾಟದಲ್ಲಿ ಮುಂದಾಳ್ತನ ವಹಿಸಿದವ. ದೇಸಾಯಿಯರನ್ನು ಒಂದೆರಡು ಸಲ ಪ್ರಾಣಾಪಾಯ ದಿಂದ ಪಾರುಮಾಡಿದವನೂ ಕೂಡ. ಅಜಾನುಬಾಹು ವ್ಯಕ್ತಿ. ಸಿಗಿದರೆ ನಾಲ್ಕು ದೇಹವಾಗಬಹುದೆಂಬಂಥ ಆಳ್ತನ. ಕೆಂಪು ಬಾವುಟ ಹಿಡಿದು ರೈತ ಚಳವಳಿಯ ಅಗ್ರಪಂಕ್ತಿಯಲ್ಲಿ–ದೇಸಾಯಿಯರ ಬಲಕ್ಕೆ-ಯಾವಾಗಲೂ ಇರುತ್ತಿದ್ದ ವ್ಯಕ್ತಿ. ಒಂದೇ ಮಾತಿನಲ್ಲಿ ಹೇಳುವುದಾದರೆ, ರಾಮ–ರಾವಣರ ಕಾಳಗದಲ್ಲಿ ರಾಮನ ಬಲಕ್ಕೆ ಹನುಮಂತನಿದ್ದ ಹಾಗೆ ದಿನಕರರ ಬಲಕ್ಕೆ ಹಾಲಕ್ಕಿ ರಾಕು.

ಒಂದು ಕೆಟ್ಟ ಗಳಿಗೆ, ರಾಕು ಮರ ಕಡಿಯಲು ಹೋದಾಗ ಮರ ಮೈಮೇಲೆ ಬಿದ್ದು ಕಾಲು ಕಳೆದುಕೊಂಡ. ಸೊಂಟಕ್ಕೂ ಹೊಡೆತ ಬಿತ್ತು. ದುಡಿವ ದೇಹ ಸತ್ತಂತಾಯ್ತು. ಹುಲಿ ಯಂಥ ರಾಕು ಇಲಿಯಂತೆ ಮುದುರಿ ಒಂದು ದಿನ ದೇಸಾಯಿ ಸಮ್ಮುಖದಲ್ಲಿ ಬಂದು ನಿಂತ. (ಆಗ ನಾನು ಆ ಸನ್ನಿವೇಶವನ್ನು ನೋಡುತ್ತ ಅಲ್ಲೇ ನಿಂತಿದ್ದೆ.)

ರಾಕುವನ್ನು ಕಂಡ ದೇಸಾಯಿ ಕರಗಿ ಹೋದರು. ಅವರ ಗಲ್ಲದ ಮೇಲಿಂದ ಕಂಬನಿಯ ಹರಳು ಉರುಳಿ ಕೆಳಗೆ ಜಾರಿ-ದವು. ಕೆಲನಿಮಿಷ ಇಬ್ಬರ ಮಧ್ಯೆ ಮೌನ. ರಾಕು ಬಿಕ್ಕಳಿಸಿದ್ದ.

'ಇದೇನಾಗಿ ಹೋಯ್ತೊ ರಾಕು?.. ಅದುಹ್ಯಾಂಗೆ ಕಡಿ ತಿದ್ದೆ ? ಆಗ್ಲಿ, ಹೆದರಬೇಡ. ನಿನಗೇನು ಬೇಕು ಹೇಳು. ವ್ಯವಸ್ಥೆಮಾಡುವಾ' ಎಂದರು ದೇಸಾಯಿ.

('ನಂಗೊಂದು ವಾರಲ ಜೋಡಿ (ಎತ್ತಿನಜೋಡಿ) ತೆಗೆಯಿಸಿಕೊಡ್ರಾ, ನನ್ನ ಆಳಿನ ಕೂಡೆ ಹೇಳಿ ತೋಡೆ (ಸ್ವಲ್ಪ) ಜಮೀನಿದ್ದದ್ದು ಸಾಗವಳ್ಮಾಡಿಸ್ತೀನ್ರಾ" ಎಂದ ರಾಕು.

'ಎಷ್ಟ್ ಬೀಳೂದು ಒಂದ ವಾರಲ ಜೋಡಿಗೆ ?'

'ಏಳನೂರಾ ಐವತ್ತು ಆತಿದ್ಯಾಬಲಾ'

'ಅರೆ ಪೈ, (ಟ್ರಸ್ಟ್ ಅಕೌಂಟಂಟ ಹೆಸರು ರಾಮಕೃಷ್ಣ ಪೈ ಎಂದು.)ಹೆಕಾ ಕಿತ್ಲ ಜಾಯ್ ಪಳೈ, ತಿತ್ಲ ಪೈಸೆ ದೀ' (ಅರೆ ಪೈ, ಇವನಿಗೆ ಎಷ್ಟ ಹಣ ಬೇಕು ನೋಡು, ಅಷ್ಟು ಕೊಡು.)

ಇನ್ನೊಂದು ಘಟನೆ :

ಮಂಜುಗುಣಿಯ ಯುವಕನೋರ್ವ ಇಪ್ಪತ್ತರ ಹರೆಯದಲ್ಲಿ ಕಾಲು ಮುರಿದುಕೊಂಡ (ಮರದ ಕೆಲಸಕ್ಕೆ ಹೋದಾಗಲೇ). ಅದನ್ನು ದೇಸಾಯರ ಗಮನಕ್ಕೆ ಯಾರೊ ತಂದರು. ದೇಸಾಯಿ ಮಣಿಪಾಲದ ಮಾಧವ ಪೈ ಅವರಿಗೆ ಒಂದು ಪತ್ರ ಕೊಟ್ಟು ಆ ತರುಣನನ್ನು ಅಲ್ಲಿ ಕಳಿಸಿದರು. ಯಾವ ಖರ್ಚೂ ಇಲ್ಲದೆ ಮಣಿಪಾಲದಲ್ಲಿ ಆತನಿಗೆ ಒಂದು ಕೃತ್ರಿಮ ಕಾಲನ್ನು ಜೋಡಿಸಲಾಯಿತು. ಆತ ಈಗ ಅಂಕೋಲಾದಲ್ಲಿ ಒಬ್ಬ ಕಂಟ್ರಾಕ್ಟರ್,–ಸುಖವಾಗಿದ್ದಾನೆ.

ಇವು ದೇಸಾಯಿ ಜನರನ್ನು ಗುರುತಿಸುವ ರೀತಿ, ಕಷ್ಟವನ್ನು ಅರಿಯುವ ಪರಿ. ಈ ಬಗೆಯ ಜನತಾಜನಾರ್ದನನ ಸೇವೆಯಲ್ಲೇ ಅವರು ತಮ್ಮ ಸ್ವರ್ಗವನ್ನು ಹುಡುಕಿಕೊಂಡವರು. ಆದ್ದರಿಂದ ಅವರಿಗೆ ಬೇರೊಂದು ಸ್ವರ್ಗದ ಬಗ್ಗೆ ಯೋಚನೆ ಇಲ್ಲ.

## ೨೩. ಉತ್ತರ ಕನ್ನಡದ ಹಂಬಲ

ದಿನಕರ ದೇಸಾಯಿ ಎಲ್ಲೇ ಇರಲಿ (ಬಹುಶಃ ಅಗಲಿದ ಅವರ ಚೇತನವೂ ಕೂಡ) ಅವರ ಮನಸ್ಸು ಉತ್ತರ ಕನ್ನಡದ ನೆಲವನ್ನೂ, ಗಿರಿ–ಕಂದರಗಳನ್ನೂ ಹಂಬಲಿಸಿ, ಹಂಬಲಿಸಿ ಕರೆಯುತ್ತಿತ್ತು.

'ಹುಟ್ಟುವುದಾದರೆ ಇನ್ನೂ ಇನ್ನೂ
ಉತ್ತರ ಕನ್ನಡದಲ್ಲೇ ಅನ್ನು'—

ಎಂದು ತಮ್ಮ ಪ್ರಥಮ ಕವನ ಸಂಕಲನದ ಒಂದು ಪದ್ಯದಲ್ಲೇ ಹಾಡಿದ ಈ ಕವಿ, ಮುಂದೆಯೂ ಕೂಡ ತನಗೆ ಜನ್ಮ ಕೊಟ್ಟ ನೆಲದ ಋಣ ಎಷ್ಟು ಹಿರಿದು ಎಂಬುದನ್ನು ಸಂದರ್ಭ ಬಂದಾಗ ಲೆಲ್ಲ ತೋಡಿಕೊಂಡದ್ದುಂಟು. ಅವರು ಉತ್ತರ ಕನ್ನಡವನ್ನು ಅಷ್ಟಾಗಿ ಹಚ್ಚಿಕೊಂಡ ಬಗ್ಗೆ ಕಾರಣ ಕಂಡು ಹಿಡಿಯುವುದೂ ಕಷ್ಟದ್ದೇನಲ್ಲ. ಅವರೇ ಹೇಳಿದ್ದಾರೆ :

'ನನ್ನ ಕನ್ನಡ ಜಿಲ್ಲೆ ಬಡತನದ ಬಿಲ್ಲೆ
ಈ ಬಿಲ್ಲೆ ಹಚ್ಚಿಕೊಂಡವರಾರು, ನಲ್ಲೆ ?
ಆಗೇರ ಮುರಕುಂಡಿ, ಹಾಲಕ್ಕಿ ರಾಕು,
ಮುಕ್ರಿ ವೆಂಕಟರಮಣ, ಹಳ್ಳೇರ ತೋಕು'.

('ನನ್ನ ಜಿಲ್ಲೆ')

ಈ ಮುರಕುಂಡಿ, ಈ ರಾಕು, ಈ ವೆಂಕಟರಮಣ, ತೋಕು-ಗಳ ಜತೆ ತಾನು ಇರಬೇಕು, ಅವರ ಕಷ್ಟ-ನಷ್ಟಗಳನ್ನು ಹಂಚಿ ಕೊಳ್ಳಬೇಕು. ಆ ಮಣ್ಣಿನ ಸಿಹಿ, ಕಹಿ, ಒಗರುಗಳನ್ನೆಲ್ಲ ಅನುಭವಿಸಬೇಕು—ಇದು ದೇಸಾಯಿ ಹಂಬಲ.

'ಒಂದು ಬದಿ ಸಹ್ಯಾದ್ರಿ ಒಂದು ಬದಿ ಕಡಲು
ನಡುಮಧ್ಯದಲಿ ಅಡಕೆ-ತೆಂಗುಗಳ ಮಡಲು

ಸಿರಿಗನ್ನಡದ ಚಪ್ಪರವೆ ನನ್ನ ಜಿಲ್ಲೆ
ಇಲ್ಲಿಯೇ ಮತ್ತೊಮ್ಮೆ ಹುಟ್ಟುವೆನು ನಲ್ಲೆ'
('ನನ್ನನಲ್ಲೆ')

ಇದು ದಿನಕರರು ಕಂಡ ಕನಸು. ಈ ಸಿರಿಗನ್ನಡದ ಚಪ್ಪರದಲ್ಲಿ ಮತ್ತೆ ಮತ್ತೆ ಹುಟ್ಟಿಬಂದು ಜನಸೇವೆ ಗೈವ ವಾಂಛ ಅವರಿಗೆ.

## ೨೪. ಪ್ರಚಾರಕ್ಕೆ ಒಪ್ಪದ ಜೀವ

ದಿನಕರ ದೇಸಾಯಿ ಅವರು ಎಂದೂ ಸ್ವಂತ ಪ್ರಚಾರ ಬಯಸಿದವರಲ್ಲ. ಅವರ ಒಂದೊಂದು ಕವನ ಸಂಕಲನಗಳ ಪ್ರಕಟಣೆಯ ಹಿಂದೆ, ಅವರ ಅಭಿಮಾನಿಗಳ ಆರೆಂಟು ವರ್ಷದ ಪಟ್ಟುಬಿಡದ ಆಗ್ರಹ ಇರುತ್ತಿತ್ತು.

ಅವರ 'ಷಷ್ಠ್ಯಬ್ದಿ'ಪೂರ್ತಿ ದಿನಾಚರಣೆಗಾಗಿ (೧೯೬೯) ಅಂದಿನ ಕರ್ನಾಟಕ ವಿಶ್ವವಿದ್ಯಾಲಯದ ಕುಲಪತಿಗಳಾದ ಡಾ॥ ಎ. ಎಸ್. ಅಡಕೆಯವರ ಅಧ್ಯಕ್ಷತೆಯಲ್ಲಿ ಒಂದು 'ಷಷ್ಠ್ಯಬ್ದಿ ಸಮಿತಿ' ಕಾರ್ಯಪ್ರವೃತ್ತವಾಯಿತಾದರೂ, ಅದರ ಪೂರ್ವಭಾವಿ ಪ್ರಚಾರಕ್ಕೆ ಅಗತ್ಯವುಳ್ಳ ತಮ್ಮ ಒಂದು ಭಾವಚಿತ್ರವನ್ನು (Photo) ತೆಗೆದುಕೊಳ್ಳಲೂ ದೇಸಾಯಿ ಒಪ್ಪಿಗೆ ನೀಡಿರಲಿಲ್ಲ.

೧೯೬೯, ಸಪ್ಟೆಂಬರ್ ೧೦ರಂದು ಈ ಕರ್ಮಯೋಗಿಯ ಷಷ್ಠ್ಯಬ್ದಿಪೂರ್ತಿ ಸಡಗರದ ಸಮಾರಂಭದಲ್ಲಿ ಪಾಲ್ಗೊಳ್ಳಲು

ನಾಡಿನ ಬೇರೆ ಬೇರೆ ಭಾಗಗಳಿಂದ ಸಾಹಿತ್ಯದಿಗ್ಗಜರು, ಶಿಕ್ಷಣ ತಜ್ಞರು, ಪತ್ರಿಕಾಕರ್ತರು, ಸಾವಿರಸಾವಿರ ಅಭಿಮಾನಿಗಳು ಅಂಕೋಲಾದಲ್ಲಿ ಮೇಳವಿಸಿದ್ದರು. ಆದರೆ, ಸಮಾರಂಭದ ಮುಖ್ಯ ಆಕರ್ಷಣೆಯಾಗಿರಬೇಕಾಗಿದ್ದ ದಿನಕರ ದೇಸಾಯಿ ಅಂದಿನ ಸಮಾರಂಭದಲ್ಲಿ ಪಾಲ್ಗೊಂಡಿರಲಿಲ್ಲ. 'ತುಂಬಿದ ಸಮಾರಂಭದಲ್ಲಿ ನನ್ನ ಹೊಗಳಿಕೆಯನ್ನು ನಾನೇ ಕೂತು ಕೇಳುವ ಸಂಕೋಚಕ್ಕೆ ದಯಮಾಡಿ ನನ್ನನ್ನು ಒಳಪಡಿಸಬೇಡಿ' ಎಂದು ಅವರು ಪತ್ರವೊಂದನ್ನು ಬರೆದು ಮುಂಬಯಿಯಲ್ಲಿ ಉಳಿದುಬಿಟ್ಟಿದ್ದರು. ಅದನ್ನು ಗಮನಿಸಿದ ಶ್ರೀ ಸದಾಶಿವ ಒಡೆಯರ ಅವರು, 'ದೇವರಿಲ್ಲದೆ ತೇರು ಎಳೆದಂತಾಯ್ತು' ಎಂದು ಉದ್ಗಾರ ಎತ್ತಿದ್ದುಂಟು.

ಹೀಗೆ, ಜೀವನದುದ್ದಕ್ಕೂ ಪ್ರಸಿದ್ಧಿ ಪ್ರಚಾರಗಳಿಂದ ದಿನಕರರು ದೂರ ಉಳಿದು ಬಿಟ್ಟಾಗ್ಯೂ ನಮ್ಮ ಪ್ರಜ್ಞಾವಂತ ಸಮಾಜ, ಸರಕಾರ ಹಾಗೂ ಸಂಘಸಂಸ್ಥೆಗಳು ದೇಸಾಯರ ವಿವಿಧಮುಖಗಳ ಸೇವೆಯನ್ನು ಗುರುತಿಸಿ, ಅವರ ಅನುಪ ಸ್ಥಿತಿಯಲ್ಲೇ ಪ್ರಶಸ್ತಿಗಳನ್ನಿತ್ತು ಗೌರವಿಸಿದ್ದುಂಟು.

೧೯೭೦ರಲ್ಲಿ 'ದಿನಕರ ಷಷ್ಠ್ಯಬ್ದಿ ಸಮಿತಿ'ಯು 'ದಿನಕರ ದರ್ಶನ' ಎಂಬ ಅಭಿನಂದನ ಗ್ರಂಥವೊಂದನ್ನು ಅವರಿಗೆ ಅರ್ಪಿ-ಸಿತು. ೧೯೭೨ರಲ್ಲಿ ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಅವರಿಗೆ ಬಂತು. ೧೯೭೩ರಲ್ಲಿ ಮುಂಬಯಿ ಕನ್ನಡಿಗರ ಮಹಾಸಮ್ಮೇಳನದಲ್ಲಿ ದೇಸಾಯರಿಗೆ 'ವರಕವಿ' ಬಿರುದಿತ್ತು

ಸನ್ಮಾನಿಸಲಾಯಿತು. ೧೯೭೪ರಲ್ಲಿ ಶಿರಸಿಯಲ್ಲಿ ಸೇರಿದ ಜಿಲ್ಲಾ ಮಟ್ಟದ ಪತ್ರಕರ್ತರ ಸಮ್ಮೇಳನವು ಅವರನ್ನು ಗೌರವಿಸಿತು. ೧೯೭೫ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯವು ದಿನಕರ ದೇಸಾಯಿ ರಿಗೆ 'ಗೌರವ ಡಾಕ್ಟರೇಟ' ನೀಡಿ ಅಭಿನಂದಿಸಿತು. ೧೯೭೦ರಲ್ಲಿ ದಿವಂಗತ ಬಿ. ಎನ್. ಗುಪ್ತಾರವರ ಜನ್ಮಭೂಮಿ ಟ್ರಸ್ಟು ದಿನಕರರಿಗೆ 'ಶ್ರೇಷ್ಠ ಪತ್ರಿಕೋದ್ಯಮಿ' ಪ್ರಶಸ್ತಿ ನೀಡಿ ಸನ್ಮಾನಿಸಿತು. ೧೯೮೦ರಲ್ಲಿ ಅವರ ಚೌಪದಿಗಳ ಬೃಹತ್ ಸಂಕಲನ 'ದಿನಕರನ ಚೌಪದಿ'ಗೆ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಬಂತು. ೧೯೮೧ರಲ್ಲಿ ಗೋವಾದ ಪರ್ತಗಾಳಿ ಮಠವು ದೇಸಾಯಿ ರನ್ನು 'ವಿದ್ಯಾಧಿರಾಜ' ಎಂಬ ಅಭಿದಾನದೊಂದಿಗೆ ಸನ್ಮಾನಿಸಿತು.

ಇವುಗಳಲ್ಲಿ ಕೆನರಾ ವೆಲ್‌ಫೆರ್ ಟ್ರಸ್ಟಿಗೆ, ಅದರ ಅಧ್ಯಕ್ಷರಾಗಿ ಹಣ ಪಡೆಯುವ ಸಂದರ್ಭ ಬಿಟ್ಟರೆ ಉಳಿದೆಲ್ಲೂ ಪ್ರಶಸ್ತಿ ಪಡೆದು ಶಾಲು ಹೊದಿಸಿಕೊಳ್ಳಲು ದೇಸಾಯಿ ಹೋಗಿಯೇ ಇಲ್ಲ ಎಂಬುದು ಗಮನಾರ್ಹ ಸಂಗತಿ. ತಮ್ಮ ಷಷ್ಠ್ಯಬ್ದಿ ಸಂದರ್ಭದಲ್ಲಿ ಅವರೇ ಬರೆದ ಒಂದು ಚೌಪದಿ ಇಲ್ಲಿ ಉಲ್ಲೇಖನೀಯ :

'ನನಗೇಕೆ ಷಷ್ಠ್ಯಬ್ದಿ ಸಾಕು ಬರವಣಿಗೆ<br>
ಕವಿಗೆ ಬೇಕಾಗಿಲ್ಲ ಯಾವ ಮೆರವಣಿಗೆ<br>
ಮೂಲೆಯಲಿ ಕುಳಿತು ಬರೆದರೆ ಒಂದು ಪದ್ಯ<br>
ತಾಯ್ನುಡಿಗೆ ಅರ್ಪಿಸಿದ ಹಾಗೆ ನೈವೇದ್ಯ'

## ೨೫. ಕೊನೆಯ ಮಾತು

ದಿನಕರ ದೇಸಾಯರ ಕುರಿತು ಹೇಳುತ್ತ ಹೋದರೆ ಹಗಲು ಜಾರಿ ರಾತ್ರಿ ಕಳೆದುದು ಅರಿವಾಗುವುದಿಲ್ಲ. ಅವರ ಬದುಕಿನ ಮಜಲುಗಳನ್ನು ಚಿತ್ರಿಸುವುದಕ್ಕೆ ಸಾವಿರ ಪುಟಗಳ ಮಿತಿ ಹಾಕಿದರೂ ಸಾಲದು. ಒಂದು ಕಡೆ ಅವರೇ, ತಾನು ಮಾಡಿದ ಕೆಲಸ ಸಿಂಧುವಿನಲ್ಲಿ ಒಂದು ಬಿಂದುವಿನಷ್ಟು ಎಂದಿ-ದ್ದಾರೆ. ಅವರ ಬದುಕನ್ನು, ಸಾಹಿತ್ಯವನ್ನು ಕುರಿತು ನಾನು ಇದುವರೆಗೆ ಬರೆವದ್ದೂ ಕೂಡ ಆ ಮಹಾನ್ ಚೇತನದ ಸಾಧನೆ ಗಳ ಸಿಂಧುವಿನಲ್ಲಿ ಒಂದು ಬಿಂದುವಿನಷ್ಟು ಮಾತ್ರ.

ಬದುಕಿನ ಬಗ್ಗೆ ಅವರು ಇಟ್ಟುಕೊಂಡ ಆದರ್ಶಕ್ಕೆ ಸಂಬಂಧಿಸಿದ ಒಂದು ಚುಟಕ ಹೀಗೆ ಹೇಳುತ್ತಿದೆ :

‘ಸಹ್ಯಾದ್ರಿಯಾಗಿರಲಿ ಜೀವನದ ಕನಸು
ಕಾವೇರಿಯಂತಿರಲಿ ಮಾನವನ ಮನಸು
ಜೋಗ ಜಲಪಾತವಾಗಲಿ ಗೈವ ಕಾರ್ಯ
ಯಶಗಳಿಸುತಿರಬೇಕು ಕಡಲ ಔದಾರ್ಯ’ (‘ಆದರ್ಶ’)

ದಿನಕರ ದೇಸಾಯಿ ತಾನು ಸತ್ತ ಮೇಲೆ ಹೊರಡಬಹುವಾದ ಸುದ್ದಿ, ಇಲ್ಲವೆ ಉದ್ಗಾರಗಳ ಬಗೆಗೂ ಒಂದು ಚುಟಕದಲ್ಲಿ ಭವಿಷ್ಯ ನುಡಿದಿದ್ದರು :

‘ಈ ಸುದ್ದಿ ಕೇಳಿದೆನು ನಾನು ಸತ್ತಾಗ
ಈ ಹೊತ್ತು ಕವಿಯ ಬಾಯಿಗೆ ಬಿತ್ತು ಬೀಗ.
ಮರೆಯಾಯ್ತು ಚುಟಕ ಬರೆಯುವ ಮಹಾವ್ಯಾಧಿ
ಜನರ ನಾಲಗೆಯಲ್ಲಿ ಪಡೆದನು ಸಮಾಧಿ’

(‘ನನ್ನ ಮರಣ ವಾರ್ತೆ’)

# ಅನುಬಂಧ

## ಡಾ|| ದಿನಕರ ದೇಸಾಯಿ ಧೀಮಂತ ಬದುಕಿನ ಹಕ್ಕಿನೋಟ

- ೧೯೦೯ ಸಪ್ಟೆಂಬರ್ ೧೦, ಅಂಕೋಲೆಯಲ್ಲಿ ಜನನ. ಪ್ರಾಥಮಿಕ ಶಿಕ್ಷಣ ಅಲಗೇರಿಯಲ್ಲಿ; ಮಾಧ್ಯಮಿಕ ಶಿಕ್ಷಣ ಅಂಕೋಲಾ, ಕಾರವಾರ; ಉಚ್ಚ ಶಿಕ್ಷಣ ಬೆಂಗಳೂರು, ಮೈಸೂರು, ಮುಂಬಯಿ.
- ೧೯೩೧. ಮೈಸೂರು ವಿ. ವಿ. ದ ಬಿ. ಎ. ಇತಿಹಾಸ ವಿಷಯದಲ್ಲಿ ಸರ್ವಪ್ರಥಮ, ಕ್ಯಾಂಡಿ ಪಾರಿತೋಷಕ.
- ೧೯೩೩. ಮುಂಬಯಿ ವಿ. ವಿ. ದ ಎಂ. ಎ. ಪ್ರಥಮ ವರ್ಗ, ಸೇಂಟ್‌ರೆಝೇವಿಯರ್ ಪಾರಿತೋಷಕ.
- ೧೯೩೪. ಮುಂಬಯಿ ವಿ. ವಿ.ದ ಎಲ್. ಎಲ್. ಬಿ
- ೧೯೩೫. ಗೋಪಾಲಕೃಷ್ಣ ಗೋಖಲೆ ಸ್ಥಾಪಿಸಿದ ಸರ್ವಂಟ್ಸ್ ಆಫ್ ಇಂಡಿಯಾ ಸೊಸೈಟಿ ಸೇರಿದ್ದು–ಆಜೀವ ಸದಸ್ಯರಾಗಿ.
- ೧೯೩೭. ಕಾರ್ಮಿಕ ಧುರೀಣರಾಗಿ ದೇಸಾಯರು. ಉಗಿ ಹಡಗು ಕೆಲಸಗಾರರ ಸಂಘ ಸ್ಥಾಪನೆ, ಅದರ ಪ್ರಧಾನ ಕಾರ್ಯದರ್ಶಿ.
- ೧೯೪೫. ಡೆನ್ಮಾರ್ಕದ ಕೋಪನ್‌ಹೇಗನ್ನಿನಲ್ಲಿ ನಡೆದ ಅಂತರ್‌ರಾಷ್ಟ್ರೀಯ ಕಾರ್ಮಿಕ ಸಮ್ಮೇಳನದಲ್ಲಿ ಪಾಲುಗೊಂಡದ್ದು.

- ೧೯೪೬. ಅಮೇರಿಕೆಯ ಸೀಯತಲ್‌ದಲ್ಲಿ ಸೇರಿದ ಅಂತರ್ ರಾಷ್ಟ್ರೀಯ ಕಾರ್ಮಿಕ ಸಮ್ಮೇಳನದಲ್ಲಿ ಭಾಗವಹಿಸಿದುದು.

- ೧೯೪೮ರಿಂದ ೧೯೬೧. ಮುಂಬಯಿ ಮಹಾನಗರಪಾಲಿಕೆಯ ಸದಸ್ಯ-ಮುಂಬಯಿ ಪೋರ್ಟ್‌ಟ್ರಸ್ಟ್‌ನ ಧರ್ಮದರ್ಶಿಯಾಗಿ ಸೇವೆ. ಉತ್ತರ ಕನ್ನಡ ಜಿಲ್ಲೆಯಲ್ಲಿ ರೈತ ಕೂಟ ಸಂಘಟನೆ-೧೯೪೦ ರಿಂದ ೪೫ರವರೆಗೆ ಜಿಲ್ಲೆಯಲ್ಲಿ ಪ್ರವೇಶಿಸದಂತೆ ಸರಕಾರದ ಪ್ರತಿಬಂಧ–ಕರ್ನಾಟಕ ಏಕೀಕರಣ ಆಂದೋಲನದಲ್ಲಿ ಅಗ್ರಪಾತ್ರ-ರಾಜ್ಯಪುನರ್ಘಟನಾ ಆಯೋಗಕ್ಕೆ ಸಲ್ಲಿಸಲು ಮನವಿ ತಯಾರಿಸಿದ್ದು.

- ೧೯೫೩. ಕೆನರಾವೆಲ್‌ಫೇರ್ ಟ್ರಸ್ಟ್ ಸ್ಥಾಪನೆ-ಜಿಲ್ಲೆಯ ೬ ತಾಲೂಕುಗಳಲ್ಲಿ ಟ್ರಸ್ಟ್ ಕೇಂದ್ರಗಳು-೨ ಡಿಗ್ರಿ ಕಾಲೇಜು' ೩ ಜ್ಯೂನಿಯರ್ ಕಾಲೇಜು, ೧೫ ಹೈಸ್ಕೂಲು, ಹಾಲಕ್ಕಿ ವಿದ್ಯಾರ್ಥಿಗಳಿಗಾಗಿ ಹಾಸ್ಟೆಲ್, ಜನತೆಯ ಸೇವೆಯಲ್ಲಿ.

- ೧೯೫೯. ಬ್ರಿಟಿಷ್ ಕೌನ್ಸಿಲ್ ಆಮಂತ್ರಣದ ಮೇರೆಗೆ ಇಂಗ್ಲೆಂಡಿಗೆ ಭೇಟಿ, ಅಲ್ಲಿಯ ಶೈಕ್ಷಣಿಕ ಸಂಸ್ಥೆಗಳ ಕಾರ್ಯಾಚರಣೆಯ ಪರಿಶೀಲನೆ.

- ೧೯೬೭ ಉ.ಕ. ಜಿಲ್ಲೆಯಿಂದ ಲೋಕಸಭೆಗೆ ಆಯ್ಕೆ–ಆಗಿನ ಶಿಕ್ಷಣ ಮಂತ್ರಿ ಡಾ॥ತ್ರಿಗುಣ ಸೇನರ ಅಧ್ಯಕ್ಷತೆಯ ಶಿಕ್ಷಣ ಸಮಿತಿಯ ಸದಸ್ಯ.

● ೧೯೫೫ ರಿಂದ ೧೯೭೨ 'ಜನಸೇವಕ' ವಾರಪತ್ರಿಕೆಯ ಚಾಲಕಶಕ್ತಿ-ಪ್ರಮುಖ ವಿಷಯಗಳ ಸಮರ್ಥವಿಶ್ಲೇಷಣೆ.

## ಸಾಹಿತ್ಯ ಸೇವೆ ಹಾಗೂ ಪ್ರಶಸ್ತಿಗಳು

ವಿದ್ಯಾರ್ಥಿ ಕವಿಯಾಗಿ ಬೆಳಕಿಗೆ—'ಕರ್ನಾಟಕ ಧುರೀಣ' ಪತ್ರಿಕೆಯಲ್ಲಿ ಪ್ರಾರಂಭಿಕ ಕವನಗಳ ಪ್ರಕಟಣೆ—ಕಾಲೇಜಿನಲ್ಲಿ ದಿ. ಬಿ. ಎಂ. ಶ್ರೀಕಂಠಯ್ಯ ಅವರಿಂದ ಪ್ರೋತ್ಸಾಹ—ಚುಟಕ ರಚನೆಯಲ್ಲಿ ಸಿದ್ಧಹಸ್ತ. 'ಚುಟಕ ಬ್ರಹ್ಮ' ಎಂದು ಪರಿಚಿತ.

## ಪ್ರಕಟಿತ ಕೃತಿಗಳು

೧. ಕಲ್ಯಾಣ ಚಾಲುಕ್ಯರ ಆಧೀನ ಮಹಾಮಂಡಲೇಶ್ವರರು (ಇಂಗ್ಲಿಷ್) ... ೧೯೫೧
೨. ಮಕ್ಕಳ ಗೀತೆಗಳು ... ೧೯೫೧
೩. ಕವನ ಸಂಗ್ರಹ ... ೧೯೫೧
೪. ಪ್ರಪಂಚದ ಕೆಲಸಗಾರರು ... ೧೯೫೩
೫. ಮಕ್ಕಳ ಪದ್ಯಗಳು ... ೧೯೫೬
೬. ಹೂಗೊಂಚಲು ... ೧೯೫೮
೭. ನಾ ಕಂಡ ಪಡುವಣ .... ೧೯೬೧
೮. ಭಾರತದಲ್ಲಿ ಪ್ರಾಥಮಿಕ ಶಿಕ್ಷಣ (ಇಂಗ್ಲಿಷ್) ... ೧೯೬೧
೯. ಮಕ್ಕಳ ಪದ್ಯ ... ೧೯೭೬

೧೦. ದಿನಕರನ ಚೌಪದಿ ... ೧೯೭೮

೧೧. ದಿನಕರಾಲಿ ಕವನಾ (ಕೊಂಕಣಿ) ... ೧೯೮೨

೧೨. ದಾಸಾಳ ... ೧೯೮೩

## ಪ್ರಶಸ್ತಿಗಳು

- ೧೯೫೬ 'ಮಕ್ಕಳ ಗೀತಗಳು' ಹಾಗೂ 'ಕವನ ಸಂಗ್ರಹ' ಗಳಿಗೆ ಮುಂಬಯಿ ಸರಕಾರದ ಬಹುಮಾನ ರೂ.೨೫೦೦
- ೧೯೭೧ರಲ್ಲಿ 'ದಿನಕರ ದರ್ಶನ' ಅಭಿನಂದನ ಗ್ರಂಥ ಸಮರ್ಪಣೆ.
- ೧೯೭೩ ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ.
- ೧೯೭೩ ಮುಂಬಯಿ ಕನ್ನಡಿಗರಿಂದ ಸನ್ಮಾನ, 'ವರಕವಿ' ಪದವಿ ಪ್ರದಾನ.
- ೧೯೭೩ ಹೊನ್ನಾವರದಲ್ಲಿ ನಡೆದ ಉ.ಕ. ಜಿಲ್ಲಾ ಸಾಹಿತ್ಯ ಸಮ್ಮೇಳನದಲ್ಲಿ ಸನ್ಮಾನ.
- ೧೯೭೪ ಶಿರಸಿಯಲ್ಲಿ ಸೇರಿದ ಜಿಲ್ಲಾಮಟ್ಟದ ಪತ್ರಕರ್ತರ ಸಮ್ಮೇಳನದಲ್ಲಿ ಸನ್ಮಾನ.
- ೧೯೭೫ ಕರ್ನಾಟಕ ವಿಶ್ವವಿದ್ಯಾಲಯದಿಂದ 'ಗೌರವ ಡಾಕ್ಟರೇಟ' ಪ್ರದಾನ.

- ೧೯೭೬ ಜನ್ಮಭೂಮಿ ಟ್ರಸ್ಟ್‌ನಿಂದ 'ಶ್ರೇಷ್ಠ ಪತ್ರಿಕೋ-ದ್ಯಮಿ' ಪ್ರಶಸ್ತಿ ರೂ-೨೦೦೦ ಹಮ್ಮಿಣಿ ಅರ್ಪಣೆ.
- ೧೯೮೦ 'ದಿನಕರನ ಚೌಪದಿ'ಗೆ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ.
- ೧೯೮೧ ಶ್ರೀ ಪರ್ತಗಾಳಿ ಸ್ವಾಮೀಜಿ ಅವರಿಂದ 'ವಿದ್ಯಾಧಿರಾಜ' ಪುರಸ್ಕಾರ.
- ೧೯೮೨ ನವೆಂಬರ್ ೬ ನಿಧನ (ಮುಂಬಯಿಯಲ್ಲಿ).



# ಒಪ್ಪೋಲೆ

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೪ | ೧೭ | ಸರಕಾರಿ ಏಂಡ್ ಸೈನ್ಸ | ಸರಕಾರಿ ಆರ್ಟ್ಸ್ ಏಂಡ್ ಸೈನ್ಸ |
| ೧೨ | ೧೮ | ಕಳೆದುಂಡಂತಿತ್ತು. | ಕಳೆದುಕೊಂಡಂತಿತ್ತು. |
| ೧೪ | ೨೦ | ಮಾಲೆನಲ್ಲಿ | ಮಾತಿನಲ್ಲಿ |
| ೨೩ | ೧೦ | ಆದರ | ಅದರ |
| ೨೪ | ೧೪ | ಪಿಲ್‌ಫೇರ್ | ವೆಲ್‌ಫೇರ್ |
| ೨೫ | ೧೨ | ಪಿಪಲ್ಸ್ | ಪೀಪಲ್ಸ್ |
| ೩೪ | ೨೧ | ಅಂತರ್‌ರಾಷೀಯ | ಅಂತರ್‌ರಾಷ್ಟ್ರೀಯ |
| ೪೨ | ೯ | ಗಡಿಯಾಂ | ಗಡಿಯಾರ |
| ೪೨ | ೧೧ | ಚಿನದ | ಚೀನದ |
| ೪೪ | ೧೯ | ಕಾಣೊತ್ತೇವೆ. | ಕಾಣುತ್ತೇವೆ. |
| ೪೫ | ೧೪ | ದಿನಗಿಂತ | ದೀನಗಿಂತ |
| ೭೦ | ೩ | ಡಿನಕರ | ದಿನಕರ |

## ಉಪನ್ಯಾಸ ಗ್ರಂಥಮಾಲೆಯ
## ಕೆಲವು ಪ್ರಕಟನೆಗಳು


೧. ಕೊಂಡಗುಳಿ ಕೇಶಿರಾಜ
—ಎಂ. ಎಂ. ಪಡಶೆಟ್ಟಿ

೨. ಗಜೇಶ ಮಸಣಯ್ಯ
—ಎಸ್. ಎಸ್. ಭೂಸರಡ್ಡಿ

೩. ಅಲ್ಪಸಂಖ್ಯಾತರು ಹಾಗೂ ಅವರ ಸಂರಕ್ಷಣೆಃ ಡಾ. ಅಂಬೇಡ್ಕರರ ವಿಚಾರಗಳು —ಎನ್. ಎ. ಪಾಟೀಲ

೪. ರಂಗಭೂಮಿಯ ನಟಸಾರ್ವಭೌಮ ಸಿದ್ರಾಮಪ್ಪ ಹಂದಿಗನೂರ —ಬಿ. ಆರ್. ನಾಡಗೌಡ

೫. ಶಿಶುನಾಳ ಶರೀಫಸಾಹೇಬರು ಹಾಗೂ ಅವರ ಅನುಭಾವ ಪದಗಳು —ಶಿವಾನಂದ ಗುಬ್ಬಣ್ಣವರ

೬. ವೀರ[illegible]ಣೆ ಬೆಳವಡಿ ಮಲ್ಲಮ್ಮ
—ಜೆ. ಜಿ. ಕಾಡದೇವರ

೭. ಭಕ್ತ ಸೂರದಾಸ
—ಬಸವರಾಜ ಅಮ್ಮಣಗಿ

೮. ಶಿಕ್ಷಣವೇತ್ತ ಡಾ. ಜಾನ್‌ಡ್ಯೂಯಿ
—ಟಿ. ಕೆ. ಹಿರೇಗಂಗೆ

೯. ಅನುಭಾವಿ ಕವಿ ಕಡಕೋಳ ಮಡಿವಾಳಪ್ಪ
—ಲಿಂಗಣ್ಣ ಸತ್ಯಂಪೇಟೆ

೧೦. ಮೋಕ್ಷಗುಂಡಂ ವಿಶ್ವೇಶ್ವರಯ್ಯ
—ಶಿವಕುಮಾರ ಪಾಟೀಲ



ಪ್ರಸಾರಾಂಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ